# ಪಾಪಿಯ ಪಾಡು

ವಿಕ್ಟರ್ ಹ್ಯೂಗೊವಿನ

# ಲೆ ಮಿಸರಾಬಲ್ಸ್

ಎಂಬ ಕಾವ್ಯದ

**ಜೆ. ಲ ಫಾರ್ಜ್‌ರವರ**

ಸಂಕ್ಷೇಪ ಪ್ರತಿಯ ಅನುವಾದ

ಅನುವಾದಕ :

**ಬೆಳ್ಳಾವೆ ನರಹರಿಶಾಸ್ತ್ರಿ**





ಪಿ. ಟಿ. ಐ. ಬುಕ್ ಡಿಪೋ
ಬೆಂಗಳೂರು ಸಿಟಿ
೧೯೩೪

# ಪೀಠಿಕೆ

---

ವಿಕ್ಟರ್ ಹ್ಯೂಗೊ ಕವಿಯು ಹತ್ತೊಂಭತ್ತನೆಯ ಶತಮಾನದ ಆದಿಭಾಗದ ೧೮೦೨ ನೆಯ ವರ್ಷದಲ್ಲಿ ಜನಿಸಿ, ಆ ಶತಮಾನವು ಅಂತ್ಯವಾಗುವುದಕ್ಕೆ ಹದಿನೈದು ವರ್ಷಗಳ ಮುಂಚೆ ೧೮೮೫ ರಲ್ಲಿ ಮೃತನಾದನು. ಹೀಗೆ ಆತನ ಜೀವಮಾನವು ಆ ಶತಮಾನದ ಹೆಚ್ಚು ಭಾಗವನ್ನಾವರಿಸಿದ್ದಿತು. ಈತನು ಫ್ರಾನ್ಸ್ ದೇಶದಲ್ಲಿದ್ದ ಫ್ರೆಂಚ್ ಕವಿಗಳಲ್ಲಿ ಅತ್ಯಂತ ಪ್ರಸಿದ್ಧನಾಗಿದ್ದುದು ಮಾತ್ರವಲ್ಲದೆ ಕೇವಲ ಘನತೆಗೇರಿದ ನಾಟಕ ಕರ್ತನೂ, ಕಾದಂಬರೀಕಾರನೂ, ನ್ಯಾಸಲೇಖಕನೂ ಆಗಿ, ತನ್ನ ಜೀವಿತದಲ್ಲಿ ಬಹು ಕಾಲ, ಫ್ರೆಂಚ್ ಗ್ರಂಥಪ್ರಚಾರ ಕಾರ್ಯದಲ್ಲಿ ಪ್ರಮುಖನಾದ ಮುಂದಾಳಾಗಿದ್ದನು.

ಈತನ ತಂದೆಯು ಈ ದೇಶದ ಪ್ರಜಾಪ್ರಭುತ್ವದಲ್ಲಿಯೂ ಮತ್ತು ಚಕ್ರಾಧಿಪತ್ಯದಲ್ಲಿಯೂ ಒಬ್ಬ ಪ್ರಸಿದ್ಧನಾದ ಉದ್ಯೋಗಿ (Officer) ಯಾಗಿದ್ದನು. ಈತನ ತಾಯಿಯು ಒಬ್ಬ ಸಮುದ್ರ ನೌಕಾಧಿಪತಿಯ (Sea Captain) ಮಗಳು. ಆದಿಯಲ್ಲಿ ಈತನು ತನ್ನ ತಂದೆಯು ಸೇನಾಧಿಪತಿಯಾಗಿ ಸ್ಪೆಯಿನ್ ದೇಶದಲ್ಲಿದ್ದಾಗ ಅಲ್ಲಿ ವಿದ್ಯಾಭ್ಯಾಸ ಮಾಡಿ ತನ್ನ ಹತ್ತನೆಯ ವರ್ಷದಲ್ಲಿ ತಾಯಿಯೊಡನೆ ಪ್ಯಾರಿಸ್ ನಗರಕ್ಕೆ ಹೋದನು. ಅನೇಕ ವರ್ಷಗಳವರೆಗೆ ಇವರು ವಿವಿಕ್ತವಾಗಿದ್ದ ಲೇ ಫಿಯುಲೆಂಟೈನ್ಸ್ ಎಂಬ ಯೋಗಿನೀ ಮಠದಲ್ಲಿ ವಾಸವಾಗಿದ್ದರು. ಈ ಮಠವನ್ನೇ ಈ ಕವಿಯು ತನ್ನ ಮಿಸರಾಬಲ್ಸ್ ಗ್ರಂಥದಲ್ಲಿ ಬೇರೆ ಹೆಸರಿನಿಂದ ವರ್ಣಿಸಿದ್ದಾನೆ.

ಈತನ ಪ್ರತಿಭೆಯು ಬಹು ಚಿಕ್ಕ ವಯಸ್ಸಿನಲ್ಲಿಯೇ ಪಕ್ವ ವಾಗಿ ವಿಕಾಸಕ್ಕೆ ಬಂದಿತು. ತಾನು ಕಲಿತ ವಿದ್ಯೆಯಿಂದಲೂ ಮನೆಯಲ್ಲಿಯ ಜೀವನ ಕ್ರಮದಿಂದಲೂ ಸಹ ಈತನಿಗೆ ಗ್ರಂಥ ಗಳಲ್ಲಿ ತುಂಬ ಅಭಿರುಚಿಯುಂಟಾಯಿತು. ತನ್ನ ಹನ್ನೆರಡನೆಯ ವರ್ಷ ವಯಸ್ಸಿನಲ್ಲಿಯೇ ಈತನು ಪದ್ಯಗಳ ಕವಿತೆಯನ್ನು ಬರೆ ಯುತ್ತಿದ್ದನು. ಎರಡು ವರ್ಷಗಳ ನಂತರ, ತಾನೊಬ್ಬ 'ಚಾಟೂ ಬ್ರಿಯಾಂಡನಾಗಲೇ ಬೇಕು. ಇಲ್ಲವಾದರೆ ಅನಾಮಧೇಯನಾಗಿ ಬಿದ್ದಿರಬೇಕು,' ಎಂದು ಸಂಕಲ್ಪಿಸಿದನು. ಚಾಟೂಬ್ರಿಯಾಂಡ್ ಎಂಬಾತನು ಅತ್ಯುತ್ತಮರಾದ ಫ್ರೆಂಚ್ ಗ್ರಂಥಕರ್ತರಲ್ಲಿ ಒಬ್ಬನು. ಇದರಿಂದ ಈ ಬಾಲಕನ ಅಭಿರುಚಿಯು ಯಾವ ಮಾರ್ಗವನ್ನನು ಸರಿಸಿತೆಂಬುದು ಸ್ಪಷ್ಟವಾಗುವುದು. ಇವನ ಹದಿನಾಲ್ಕನೆಯ ವರ್ಷ ದಲ್ಲಿ ಇವನನ್ನೂ ಇವನ ಸೋದರನನ್ನೂ ಒಂದು ಶಿಲ್ಪಕಲೆಯ ಪಾಠ ಶಾಲೆಗೆ ಕಳುಹಿಸಿದರು. ಆದರೆ ಇವನಿಗೆ ಮಾತ್ರ ತನ್ನನ್ನು ಗ್ರಂಥ ಪ್ರಪಂಚವು ಬಯಸುತ್ತಿರುವುದೆಂಬುದು ಗೋಚರವಾಯಿತು.

ತನ್ನ ಹದಿನೈದನೆಯ ವರ್ಷ ವಯಸ್ಸಿನಲ್ಲಿ ಇವನು, ಫ್ರೆಂಚ್ ವಿದ್ಯಾವರ್ಧಕ ಮಂಡಲಿಯಿಂದ (French Academy) ಏರ್ಪ ಟ್ಟಿದ್ದ ಬಹುಮಾನ ಸ್ಪರ್ಧೆಯಲ್ಲಿ ಭಾಗಿಯಾಗಿ ಗೌರವ ಪ್ರಶಸ್ತಿ ಯನ್ನು (Honourable mention) ಪಡೆದನು. ಮೂರು ವರ್ಷ ಗಳಾದಮೇಲೆ ಟೂಲೂಸ್ ನಗರದ ಕವಿತಾ ಸ್ಪರ್ಧೆಯಲ್ಲಿ ಇವನಿಗೆ ಮೂರು ಬಹುಮಾನಗಳು ದೊರೆತವು. ತನ್ನ ಹದಿನೆಂಟನೆಯ ವರ್ಷದಲ್ಲಿ, ಇವನು ಗ್ರಂಥಪ್ರಚಾರಕ ಪಕ್ಷಪತ್ರಿಕೆ (Fortnightly literary journal) ಯೊಂದನ್ನು ಪ್ರಕಟಿಸಲಾರಂಭಿ ಸಿದನು. ಇದರಿಂದ ಇವನಿಗೆ ಧನ ನಷ್ಟವಾಯಿತು. ಇದರ ಜೊತೆಗೆ, ಇವರ ತಂದೆಯೂ ಇವನಿಗೆ ಕೊಡುತ್ತಿದ್ದ ವೆಚ್ಚದ ಹಣ ವನ್ನು ಕೊಡದೆ ನಿಲ್ಲಿಸಿಬಿಟ್ಟನು. ಈ ಕಾರಣಗಳಿಂದ ಇವನಿಗೆ ತುಂಬ ಬಡತನವು ಪ್ರಾಪ್ತವಾಯಿತು. ಕೆಲವು ವರ್ಷಗಳಾದ ಮೇಲೆ ಇವನು 'ಲೆ ಮಿಸರಾಬಲ್ಸ್' ಗ್ರಂಥದಲ್ಲಿ ಮೇರಿಯಸ್ಸನ

ಕಥೆಯನ್ನು ಬರೆಯುವಾಗ, ತಾನು ಪಟ್ಟ ಬಡತನದ ಕಷ್ಟಗಳೆಲ್ಲವನ್ನೂ ವಿವರಿಸಿ ತನ್ನ ಅನುಭವವನ್ನು ಸದುಪಯೋಗಪಡಿಸಿದ್ದಾನೆ.

ಇವನ ಇಪ್ಪತ್ತನೆಯ ವಯಸ್ಸಿನಲ್ಲಿ ಇವನ ಅಣ್ಣನಾದ ಏಬೆಲನು ಇವನ ಪದ್ಯಕಾವ್ಯವೊಂದನ್ನು ಮುದ್ರಿಸಲು ಧನಸಹಾಯ ಮಾಡಿದನು. ಇದರಿಂದ ಇವನಿಗೆ ಆ ಗ್ರಂಥ ಪ್ರಚಾರಕನಿಂದ ಏಳುನೂರು ಫ್ರಾಂಕುಗಳ ಆದಾಯವಾದುದಲ್ಲದೆ, ಇವನ ಬುದ್ಧಿಶಕ್ತಿಗಾಗಿ ೧೮ನೆಯ ಲೂಯಿ ದೊರೆಯಿಂದ (Louis XVIII) ಸನ್ಮಾನವು ದೊರೆತು ವರ್ಷಾಶನವು ಸಹ ಏರ್ಪಟ್ಟಿತು. ಇದರ ಆಧಾರದಿಂದ ಇವನು ತನ್ನ ಸೋದರತ್ತೆಯ ಮಗಳಾದ ಅಡೇಲ್ ಫೌಚರ್ ಎಂಬುವಳನ್ನು ಮದುವೆಯಾಗಿ ಬಹು ಸುಖವಾಗಿ ಸಂಸಾರ ಮಾಡಿಕೊಂಡಿದ್ದನು.

ಮಾರನೆಯ ವರ್ಷವೇ ಇವನ ಪ್ರಥಮ ಕಾದಂಬರಿಯು ಮುದ್ರಣವಾಗಿ ಹೊರಗೆ ಬಂತು. ಅನಂತರ ವರ್ಷವರ್ಷಕ್ಕೂ ನಾಟಕಗಳೂ, ಕಾವ್ಯಗಳೂ, ಕಲ್ಪಿತ ಕಥೆಗಳೂ ಸಹ ಪ್ರಕಟವಾಗುತ್ತ ಬಂದವು. ಇದರಿಂದ ಸ್ವಲ್ಪ ಕಾಲದಲ್ಲಿಯೇ ಇವನು ಫ್ರಾನ್ಸ್ ದೇಶದ ವಿದ್ಯಾ ಪ್ರಚಾರಕರಲ್ಲಿ ಪ್ರಮುಖನಾದನು. ಇವನಿಗೆ ಕವಿತೆಯಲ್ಲಿ ಮಾತ್ರ ವಿಶೇಷವಾದ ಪ್ರಶಸ್ತಿಯುಂಟಾಗಿದ್ದಿತು. ಸ್ವಿನ್‌ಬರ್ನ್ ಎಂಬ ಗ್ರಂಥಕರ್ತನು, ಇವನ ವಿಚಾರವಾಗಿ, 'ಪ್ರಪಂಚದಲ್ಲಿ ಹುಟ್ಟಿದ, ಕರುಣಗೀತೆ ಭಾವಗೀತೆಗಳನ್ನು ಬರೆದ ಅತ್ಯುತ್ತಮ ಕವಿಗಳಲ್ಲಿ ಇವನೊಬ್ಬನು,' ಎಂದು ಹೇಳಿದ್ದಾನೆ. ಇವನಿಗೆ ಮೂವತ್ತು ವರ್ಷಗಳ ವಯಸ್ಸಾಗುವುದಕ್ಕೆ ಮೊದಲೇ ಇವನು 'ಹೆರ್ನಾನಿ' (Hernani) ಎಂಬ ಒಂದು ನಾಟಕ ಗ್ರಂಥವನ್ನು ಲೋಕಕ್ಕೆ ಪ್ರಕಟಿಸಿದನು. ಈ ಗ್ರಂಥದಿಂದ, ಇವನು ಷೇಕ್ಸ್‌ಪಿಯರನಿಂದ ಈಚೆಗೆ ಹುಟ್ಟಿದ ಕವಿಗಳಲ್ಲೆಲ್ಲ ಅತ್ಯುತ್ತಮನಾದ ವಿಷಾದಾಂತ ನಾಟಕ ಕರ್ತನೆಂಬುದು ಸ್ಪಷ್ಟಪಟ್ಟಿತು. ಇವನ ಪದ್ಯ ನಾಟಕಗಳು ಅತ್ಯಂತ ಸುಂದರ

ವಾಗಿರುವುವು. ಗದ್ಯ ನಾಟಕಗಳು ಸಹ ಆ ಪದ್ಯ ನಾಟಕಗಳ ಅಂತಸ್ತಿಗೇ ಬರುವುವೆಂದು ಹೇಳಬಹುದು. ಮತ್ತೆ ಸ್ವಿನ್‌ಬರ್ನನ ಅಭಿಪ್ರಾಯವನ್ನು ಹೇಳುವುದಾದರೆ, 'ವಿಕ್ಟರ್ ಹ್ಯೂಗೋವಿನ ಗದ್ಯವು, ಇತರ ಕೆಳಗಣ ಅಂತಸ್ತಿನ ನಾಟಕ ಕರ್ತರ ಅಥವಾ ಕವಿಗಳ ಪದ್ಯಕ್ಕಿಂತಲೂ ಮೇಲಾದ ಸ್ಥಾನದಲ್ಲಿ ಗಣನೆಯಾಗುವುದು,' ಎಂದು ಬರೆದಿರುವನು. ಇಂತಹ ಕವಿತಾ ಸೌಂದರ್ಯವು ಈ ಗ್ರಂಥಗಳನ್ನು ಬೇರೆ ಭಾಷೆಗಳಿಗೆ ಪರಿವರ್ತನೆ ಮಾಡುವುದರಿಂದ, ಸಂಪೂರ್ಣವಾಗಿ ಉಳಿಯಲು ಸಾಧ್ಯವಿಲ್ಲದೆ ಬಹುಮಟ್ಟಿಗೆ ಅಳಿದು ಹೋಗಿರುವುದು.

ಇವನ ಮೂವತ್ತೆಂಟನೆಯ ವರ್ಷದಲ್ಲಿ, ಹ್ಯೂಗೋ ಕವಿಯು ಫ್ರೆಂಚ್ ವಿದ್ಯಾಯತನದ ಸದಸ್ಯನಾದನು. ಅನಂತರ ನಾಲ್ವತ್ತ ನಾಲ್ಕನೆಯ ವರ್ಷದಲ್ಲಿ ದಿ ಚೇಂಬರ್ ಆಫ್ ಪಿಯರ್ಸ್ ಎಂಬ ಫ್ರೆಂಚ್ ರಾಜಸಭೆಯ (House of Lords) ಸದಸ್ಯನಾದನು. ಆದರೆ ಐದು ವರ್ಷಗಳನಂತರ ಎರಡನೆಯಾವೃತ್ತಿ ಫ್ರೆಂಚ್ ಚಕ್ರಾಧಿಪತ್ಯವು ಸ್ಥಾಪಿತವಾದ ಮೇಲೆ, ಇವನನ್ನು ಮೊದಲು ಬ್ರಸೆಲ್ಸ್ ಪಟ್ಟಣಕ್ಕೂ ಅನಂತರ ಜೆರ್ಸಿ ನಗರಕ್ಕೂ ಕಡೆಗೆ ಗರ್ನ್‌ಸೇ ಪಟ್ಟಣಕ್ಕೂ ಗಡೀಪಾರು ಮಾಡಿದರು. ಇವನು ಮತ್ತೆ ತನಗೆ ಪ್ರಿಯ ದೇಶವಾದ ಫ್ರಾನ್‌ಸನ್ನು ನೋಡಲು ಇಪ್ಪತ್ತು ವರ್ಷಗಳು ಕಳೆಯಬೇಕಾಯಿತು. ಈ ವರ್ಷಗಳು ಇವನ ಮನಸ್ಸನ್ನು ಉಕ್ಕಿನಂತೆ ಸ್ಥಿರಮಾಡಿ ಬುದ್ಧಿಶಕ್ತಿಯನ್ನು ಪರಿಪಕ್ವ ಸ್ಥಿತಿಗೆ ತಂದವು. ಈ ಕಾಲದಲ್ಲಿಯೇ ಇವನು ತನ್ನ ಅತ್ಯಂತ ಪ್ರಖ್ಯಾತವಾದ ಕವಿತೆಗಳಲ್ಲಿ ಬಹು ಭಾಗವನ್ನೂ ತನ್ನ ಐದು ಅದ್ಭುತ ಕಾದಂಬರಿಗಳಲ್ಲಿ ನಾಲ್ಕಾದ, 'ನೋಟರ್ಡೇಂ ಡಿ ಪ್ಯಾರಿಸ್,' 'ಲೆ ಮಿಸರಾಬಲ್ಸ್,' 'ದಿ ಟಾಯಿಲರ್ಸ್ ಆಫ್ ದಿ ಸಿ,' ಮತ್ತು 'ದಿ ಮ್ಯಾನ್ ಹು ಲಾಫ್ಸ್' ಎಂಬುವುಗಳನ್ನೂ ಬರೆದುದು. ಇವನು ಪ್ಯಾರಿಸ್ ನಗರಕ್ಕೆ ಹಿಂದಿರುಗಿ ಬಂದ ಮೇಲೆ, ಫ್ರೆಂಚ್ ರಾಜ್ಯ ವಿಪ್ಲವ (The French Revolution) ವಿಷಯವಾದ

‘ನೈಂಟಿತ್ರೀ’ (೧೭೯೩ನೆಯ ವರ್ಷ) ಎಂಬ ಅದ್ಭುತ ಕಾದಂಬರಿಯನ್ನು ಬರೆದನು. ಈ ಎಲ್ಲ ಕಾದಂಬರಿಗಳಲ್ಲಿಯೂ ಇವನು ಇಟ್ಟಿರುವ ಅದ್ಭುತ ರಸಭಾವ ಪ್ರಮಾಣಗಳನ್ನು ನೋಡಿದರೆ ಮಿಕ್ಕ ಲೇಖಕರ ಗ್ರಂಥಗಳು ಕೇವಲ ಅಲ್ಪವಾಗಿ ಕಾಣುವುವು. ಇವುಗಳಲ್ಲಿ ಕೆಲವು ನ್ಯೂನಾತಿರೇಕಗಳೂ ದೋಷಗಳೂ ಇರುವುವಾದರೂ, ಈ ಗ್ರಂಥಗಳು ಆಗಿನ ಕಾಲದ ಇತರ ಎಲ್ಲ ಲೇಖಕರ ಗ್ರಂಥಗಳಿಗಿಂತಲೂ ಯೋಗ್ಯತೆಯಲ್ಲಿ ಮೀರಿರುವುವು. ಸ್ಟೀವನ್‌ಸನ್ ಎಂಬಾತನು, ‘ಆತನು ಎಲ್ಲಿ ಜಾರಿಬೀಳುವನೆಂದು ತಿಳಿದುಕೊಳ್ಳುವ ಜ್ಞಾನವು ನಮಗಿದ್ದರೂ, ನ್ಯಾಯ ವಿಮರ್ಶೆಯಿಂದ ಅವನು ನಮ್ಮ ಕಾಲದ ಅತ್ಯಂತ ಶ್ರೇಷ್ಠನಾದ ಕಲಾಚತುರನು ಮಾತ್ರವಲ್ಲದೆ ಅನೇಕ ವಿಧಗಳಲ್ಲಿ ಎಲ್ಲ ಕಾಲಗಳ ಶ್ರೇಷ್ಠ ಕಲಾಕೋವಿದರಲ್ಲಿ ಒಬ್ಬನೆಂದು ಅವನನ್ನು ಗೌರವಿಸಬೇಕು,’ ಎಂದು ಹೇಳಿರುವನು.

ವಿಕ್ಟರ್ ಹ್ಯೂಗೊ ಕವಿಯು ೧೮೮೫ನೆಯ ಮೇ ೨೨ನೆಯ ದಿನ ಪ್ಯಾರಿಸ್ ನಗರದಲ್ಲಿ ಮೃತನಾದನು. ಈತನು ಆರ್ಜಿಸಿದ್ದ ಅದ್ಭುತ ಕೀರ್ತಿಯಿಂದ ಜನರೆಲ್ಲರೂ ಈತನಿಗಾಗಿ ಪಟ್ಟ ವ್ಯಥೆಯು ಅಭೂತಪೂರ್ವವಾಗಿತ್ತು. ಈತನ ಶವವನ್ನು ಆರ್ಕ್ ಡಿ ಟ್ರಯಂಫ್ ಎಂಬ ರಾಜಕೀಯ ಸ್ಥಾನದಲ್ಲಿಟ್ಟು ಜನರು ಗೌರವಿಸಿದರು. ಈತನ ಶವದ ಮೆರವಣಿಗೆಯು ರಾಜರೂ ನೋಡಿ ಅಸೂಯೆಪಡುವಂತಿದ್ದುದಲ್ಲದೆ ಅರಸರಿಗೂ ಅಲಭ್ಯವಾಗಿತ್ತು. ಪ್ಯಾರಿಸ್ ನಗರಾಭಿಮಾನಿಯಾದ ಸೆಂಟ್ ಜೆನಿವೀರ್ ಎಂಬ ಯೋಗಿಯ ಶವದ ಅವಶಿಷ್ಟ ಭಾಗಗಳನ್ನು ಮಹಾತ್ಮರ ಪಙ್ಕ್ತಿಯಿಂದ ತೆಗೆದು ಅಲ್ಲಿ ಜನಪ್ರಿಯನಾದ ಈ ವೀರನಿಗೆ ಸ್ಥಳವನ್ನೇರ್ಪಡಿಸಿದರು. ಈ ರೀತಿಯಾಗಿ ತನ್ನ ಕಾಲದ ಕವಿಗಳಲ್ಲಿ ನಿಸ್ಸಮಾನನೂ, ಅಗಾಧ ಪ್ರತಿಭೆಯ ಅತ್ಯಂತ ಶ್ರೇಷ್ಠನೂ ಮತ್ತು ಎಲ್ಲ ಕಾಲಗಳ ಶ್ರೇಷ್ಠವ್ಯಕ್ತಿಗಳಲ್ಲಿಯೂ ಗಣ್ಯನೂ ಆದ ಈ ಮಹನೀಯನು ಜೀವಿಸಿದ್ದು ಪರಂಧಾಮವನ್ನೈದಿದನು.

**ಲೆ ಮಿಸರಾಬಲ್ಸ್**:—ಈ ಮಹಾ ಗ್ರಂಥವು ೧೮೬೨ರಲ್ಲಿ, ಒಂದೇ ದಿನ, ಹನ್ನೆರಡು ಭಾಷೆಗಳಲ್ಲಿ ಪ್ರಚುರವಾಯಿತು. ಇಂತಹ ವಿಷಯವು ಇದಕ್ಕೆ ಹಿಂದೆ ಗ್ರಂಥಚರಿತ್ರೆಯಲ್ಲಿ ಯಾವಾಗಲೂ ನಡೆದಿರಲಿಲ್ಲ. ಹತ್ತು ಭಾಗಗಳಾಗಿ ಬರೆದಿದ್ದ ಈ ದೊಡ್ಡ ಕಾದಂಬರಿಯು ಆ ಕೂಡಲೇ ಪ್ರಪಂಚದ ಶ್ರೇಷ್ಠತಮವಾದ ಕಲ್ಪಿತ ಕಥಾಗ್ರಂಥಗಳಲ್ಲಿ ಸೇರಿ ಗಣ್ಯವೆನಿಸಿಕೊಂಡಿತು. ಇದರಲ್ಲಿ ಕಥಾಸರಣಿಯು ಅವಿಚ್ಛಿನ್ನವಾಗಿಲ್ಲವೆಂತಲೂ, ವಿಷಯ ವಿವರಣೆ ಯಲ್ಲಿ ಉಚಿತ ಪ್ರಮಾಣವಿಲ್ಲವೆಂತಲೂ, ಗ್ರಂಥವು ಮಿತಿಮೀರಿ ವಿಸ್ತರಿಸಲ್ಪಟ್ಟಿರುವುದು ಮಾತ್ರವಲ್ಲದೆ ಕವಿಯ ಮನಸ್ಸಿನ ಕೆಲವು ನಂಬಿಕೆಗಳಿಗನುಸಾರವಾಗಿ ಕಥೆಯು ಬೆಳೆದಿರುವುದೆಂತಲೂ ಗ್ರಂಥ ವಿಮರ್ಶಕರು ಇದರಲ್ಲಿ ದೋಷಗಳನ್ನಾರೋಪಿಸಿದರೂ ಇದು ಮಹಾ ಕಾವ್ಯಗಳಲ್ಲಿ ಗಣ್ಯವಾದುದೆಂದು ಮಾತ್ರ ಒಪ್ಪಿರುವರು.

ಜೀನ್ ವಾಲ್ಜೀನನು ಅದ್ಭುತ ವೀರನಾದ ಕಥಾನಾಯಕನು. ಇವನಿಗೆ ಒದಗಿದ ಭೌತಿಕ, ನೈತಿಕ ಮತ್ತು ಮಾನಸಿಕ ಪ್ರತಿಬಂಧಕ ಗಳನ್ನು ನಿವಾರಿಸಿಕೊಳ್ಳಲು ಇವನು ಪ್ರಯೋಗಿಸಿದ ಶಕ್ತಿಯು ಬಹುಮಟ್ಟಿಗೆ ಅಮಾನುಷವೇ ಸರಿ. ಇವನ ಸಾಹಸ ಕಾರ್ಯಗಳು, ಪಲಾಯನಗಳು, ಆಶಾಪಾಶಗಳು, ಮತ್ತು ಧೀರತನದ ವರ್ತನ ಗಳು, ಓದುಗರಿಗೆ ಕಡೆಯ ಪುಟದವರೆಗೂ ಉಸಿರಾಡಲವಕಾಶ ಕೊಡದಷ್ಟು ಉತ್ಸಾಹಾತುರಗಳನ್ನು ಹುಟ್ಟಿಸಿ ಅವರನ್ನು ಮುಂದು ಮುಂದಕ್ಕೆ ಎಳೆದುಕೊಂಡು ಹೋಗುವುವು. ಆದರೆ ಇದು ಮಹಾ ವ್ಯಕ್ತಿಯ ಅದ್ಭುತ ಸಾಹಸ ಕೃತಿಯ ಒಂದು ಕಥೆಯು. ಅಲ್ಲದೆ ಭೂತದಯಾಪರನಾದ ಮನುಷ್ಯನು ತನ್ನ ಕಾಲದ ಅನ್ಯಾಯ ವರ್ತನಗಳ ವಿಷಯದಲ್ಲಿ ಹೇಗೆ ಕೆರಳಿ ಹೊಡೆದಾಡುವ ನೆಂಬುದರ ಪ್ರತ್ಯಕ್ಷ ನಿದರ್ಶನವು.

ಹ್ಯೂಗೊ ಕವಿಯು ಮಾನವರನ್ನು ಪ್ರೀತಿಸಿ, ಹಿಂಸೆ, ನೀಚತನ, ಕ್ರೌರ್ಯ, ಮತ್ತು ದುರಾಶೆಗಳನ್ನು ದ್ವೇಷಿಸುತ್ತಿ ದ್ದವನು. ಈತನು ಪ್ರಾರಂಭದಲ್ಲಿ ಬರೆದ ಕಥೆಗಳಲ್ಲಿ 'ದಿ ಕಂಡೆಮ್ಡ್

ಮ್ಯಾನ್ಸ್ ಲಾಸ್ಟ್ ಡೆ ’ (ಶಿಕ್ಷಾಬದ್ಧನಾದವನ ಕಡೆಯ ದಿನ) ಎಂಬುದೊಂದು. ಇದು, ಮರಣದಂಡನೆಯು ಅನ್ಯಾಯವೆಂಬುದನ್ನು ಪ್ರಬಲವಾಗಿ ಸ್ಥಾಪಿಸಿ ಬರೆದ ಕಥೆಯು. ‘ಲೆ ಮಿಸರಾಬಲ್ಸ್’ ಕಥೆಯೂ ಸಹ ಹೀಗೆಯೇ—ಅಪರಾಧಿಯನ್ನು ಕಾಪಾಡಿ ಅವನನ್ನು ಸಮಾಜಕ್ಕೆ ಅರ್ಹನಾಗುವಂತೆ ಯೋಗ್ಯನನ್ನಾಗಿ ಮಾಡುವುದನ್ನು ಬಿಟ್ಟು, ಅವನಿಗೆ ಶಿಕ್ಷೆಯನ್ನು ವಿಧಿಸಿ ಸೇಡನ್ನು ತೀರಿಸಿಕೊಳ್ಳುವ ಮನೋವೃತ್ತಿಯು ಕೇವಲ ಅನ್ಯಾಯವೆಂಬುದನ್ನೇ ಪ್ರಬಲವಾಗಿ ಸ್ಥಾಪಿಸುವುದು. ಸಮಾಜೋದ್ಧಾರಕವಾದ ಕಾದಂಬರಿಯನ್ನು ಬರೆಯುವುದೆಂದರೆ ಬಹು ಕಷ್ಟ. ನೀತಿಬೋಧನೆಯನ್ನು ಗುರಿಯಾಗಿಟ್ಟುಕೊಂಡು ಬರೆದ ಅನೇಕ ಕಲ್ಪಿತ ಗ್ರಂಥಗಳು ಕಲಾದೃಷ್ಟಿಯಿಂದ ಸರಿಯಾಗಲಾರವು. ಗ್ರಂಥಕರ್ತನು ತನ್ನ ಪಾತ್ರಗಳ ಬಾಯಿಂದ ನೀತಿಭಾವಗಳನ್ನು ಹೇಳಿಸಬಹುದು. ಆದರೆ ಆ ಪಾತ್ರ ವ್ಯಕ್ತಿಗಳು ಕೇವಲ ಬೊಂಬೆಗಳಂತೆ ತೋರಿ, ಆ ಗ್ರಂಥವು ಒಂದು ಧರ್ಮ ಪ್ರಸಂಗದಂತೆಯೋ ಅಥವಾ ಉಪನ್ಯಾಸದಂತೆಯೋ ಪರಿಣಮಿಸುವುದೂ ಉಂಟು. ಇಂತಹ ಗ್ರಂಥಕರ್ತರು, ‘ವ್ಯಕ್ತಿಯ ನಡತೆಯೇ ಕಥಾವಸ್ತು’ ವೆಂಬುದನ್ನು ಮರೆತಿರುವರು. ಕಥಾಪಾತ್ರಗಳಲ್ಲಿ ಪರಸ್ಪರ ವಿರೋಧ ಗುಣಗಳೂ ಅಥವಾ ನಾಯಕನಿಗೆ ವಿರೋಧವಾದ ಸಂದರ್ಭಗಳ ಘಟನೆಯೂ, ಇವುಗಳೆಲ್ಲವೂ ಚೆನ್ನಾಗಿ ಗ್ರಹಿಸಿ ತಿಳಿಯತಕ್ಕವನನ್ನು ಆನಂದಪರವಶನನ್ನಾಗಿ ಮಾಡತಕ್ಕ ಮನೋರಂಜಕ ವಿಷಯಗಳು. ಜೀವನದ ಕಷ್ಟಸುಖಗಳನ್ನು ಚೆನ್ನಾಗಿ ಅನುಭವಿಸಿ ತಿಳಿದಿರತಕ್ಕ ಉತ್ತಮ ಕಲಾಕೋವಿದನು, ತಾನು ಉದ್ದೇಶಿಸಿರುವ ಸಾಮಾಜಿಕ ಭಾವಗಳನ್ನು ತನ್ನ ಕಥಾನಾಯಕನ ಕಷ್ಟಾನುಭವಗಳಲ್ಲಿ ಬಹು ಚಾತುರ್ಯದಿಂದ ಅಂತರ್ಗತಮಾಡಿ ಹೊಂದಿಸಿ, ನಮಗೆ ಸಂತೋಷವೂ ಉತ್ಸಾಹವೂ ಉಕ್ಕುವಂತೆ ಮಾಡುವುದಲ್ಲದೆ ನಮ್ಮ ಅಂತರಾತ್ಮವೂ ಸಹ ಅದಿರಿ ನಡುಗುವಂತೆ ಮಾಡಬಲ್ಲನು. ಘನವಾದ ಕಥಾವಸ್ತುವಿನಿಂದಲೂ ಕಲಾಪಾರಂಗತನಾದ ಕವಿಯ ಉತ್ತಮ ಸರಣಿ

ಶಯ್ಯೆಗಳಿಂದಲೂ 'ಲೆ ಮಿಸರಾಬಲ್ಸ್' ಗ್ರಂಥವು 'ದಿ ಡಿವೈನ್ ಕಾಮೆಡಿ' ಮತ್ತು 'ಪ್ಯಾರಡೈಸ್ ಲಾಸ್ಟ್' ಎಂಬ ಗ್ರಂಥಗಳ ಅಂತಸ್ತಿಗೆ ಸೇರತಕ್ಕುದಾಗಿರುವುದು.

ಸ್ಟೀವನ್‌ಸನ್ನನು ಈ ಗ್ರಂಥವನ್ನೂ ಇದರ ಕರ್ತನನ್ನೂ ಕುರಿತು, ಹೀಗೆ ಹೇಳಿರುವನು :—'ಇದರಲ್ಲಿ ಹ್ಯೂಗೊ ಕವಿಯು ಸಾಧ್ಯವಾದ ನುಟ್ಟಿಗೂ ಗ್ರಾಂಥಿಕ ನಿಯಮಗಳನ್ನು ಅನುಸರಿಸಿದ್ದಾನೆ. ಆತನ ಬುದ್ಧಿ ಶಕ್ತಿಗಳ ಪರಿಪಕ್ವ ಸ್ಥಿತಿಯೂ, ಬಹು ಸುಲಭ ರೀತಿಯಿಂದ ಆ ಶಕ್ತಿಗಳನ್ನು ಏಕಾಸಕ್ಕೆ ತಂದಿರುವ ಕೌಶಲವೂ ನಿಜವಾಗಿಯೂ ಇದರಲ್ಲಿ ಕಾಣುತ್ತಿವೆ. ಸ್ವಲ್ಪ ಮಟ್ಟಿಗೆ ಪ್ರಬೋಧನವನ್ನು ಕೊಟ್ಟು ನಮ್ಮನ್ನು ಕಣ್ದೆರೆಯುವಂತೆ ಮಾಡುವುದೇ ಈ ಕಾದಂಬರಿಯ ಪರಮೋದ್ದೇಶವಾಗಿರುವುದೆಂದರೆ ತಪ್ಪಲ್ಲ. ನಾವು ಸೇರಿ ಆನಂದಿಸಿ ಸುಖಿಸುತ್ತಿರುವ ಸಮಾಜವು, ಸೇವಾವೃತ್ತಿಗೆ ನಿಂತು ಕಷ್ಟಪಟ್ಟು ಬೆವರಿಳಿಸಿ ಕೆಲಸಮಾಡಿ ಆ ಸಮಾಜವನ್ನು ಹೊತ್ತು ನಡೆಯಿಸುತ್ತಿರುವ ಬಡ ಜನರಿಗೆ ಎಷ್ಟು ಕ್ರೂರ ತರಹದ ಹಿಂಸೆಯಾಗಿದೆ ಎಂಬುದನ್ನು ತೋರಿಸುವುದೇ ಈ ಕಥೆಯ ನೀತಿಯು. ಲೋಕವ್ಯವಹಾರದಲ್ಲಿ ಕಣ್ಮುಚ್ಚಿ ಕುಳಿತಿರುವುದೇ ಜನರಿಗೆ ಹಿತ. ನಮ್ಮ ಧರ್ಮ ನೀತಿಗಳು ಸಾಮಾನ್ಯವಾಗಿ ಒಂದಾವೃತ್ತಿ ನ್ಯಾಯ ರೀತಿಯಿಂದ ನಡೆಯುವುದಕ್ಕಾಗಿ ಒಂದು ಕೋಟಿ ಜನರಿಗೆ ಅನ್ಯಾಯ ಮಾಡುವುವೆಂಬುದನ್ನು ಮರೆತಿರುವುದೇ ಅವರಿಗೆ ಒಂದು ಬಗೆಯ ಸಂತೋಷ. ನಾವು ತಿನ್ನುವ ಆಹಾರ, ಸಂಸಾರದ ಸುಖಶಾಂತಿಗಳು, ಮತ್ತು ನಮ್ಮ ಜೀವನವನ್ನು ಆನಂದಕರವನ್ನಾಗಿ ಮಾಡತಕ್ಕ ಇತರ ಎಲ್ಲ ವಿಷಯಗಳೂ ಮರಣವನ್ನು ಬೆಲೆಯಾಗಿ ಕೊಟ್ಟು ಕೊಂಡುಕೊಳ್ಳತಕ್ಕುವುಗಳಾಗಿವೆ. ಎಂತಹ ಮರಣ? ಪ್ರಾಣಿಗಳ ಮರಣ, ಕಷ್ಟಪಟ್ಟು ಕೆಲಸಮಾಡಿ ದಣಿದು ಬಿದ್ದವರ ಮರಣ, ಹಿಂಸಾಪರರೂ ದ್ರೋಹಿಗಳೂ ಆದ ಅಪರಾಧಿಗಳ ಮರಣ, ಮತ್ತು ಅಪರಾಧಿಗಳೆಂದು ಕರೆಯಲ್ಪಡುವ ರಾಜ್ಯ ಕಂಟಕರ ಮರಣ. ಇಂತಹ ಎಲ್ಲ

ವಿಷಯುಗಳೂ ಸ್ವಲ್ಪ ಮಟ್ಟಿಗಾದರೂ ಜನರಿಗೆ ಗೋಚರವಾಗು ವಂತೆ "ಲೆ ಮಿಸರಾಬಲ್ಸ್" ಗ್ರಂಥದ ಮೂಲಕ ಅವರ ಕಣ್ಣುಗಳನ್ನು ತೆರೆಯಬೇಕೆಂಬುದೇ ವಿಕ್ಟರ್ ಹ್ಯೂಗೊ ಕವಿಯ ಉದ್ದೇಶ. ಇಂತಹ ನೀತಿ ಪಾಠವು ಅದ್ಭುತ ಕಲಾ ನೈಪುಣ್ಯದಿಂದ ಬಹು ಮನೋಹರವಾಗಿರುವಂತೆ ಈ ಗ್ರಂಥದಲ್ಲಿ ಬೋಧಿಸಲ್ಪಟ್ಟಿರುವುದು. ನಾವು ಅದನ್ನು ಓದುವಾಗ ನಾಗರಿಕತೆಯ ಭಯಂಕರ ಭಾರವು ನಮ್ಮ ಭುಜಗಳ ಮೇಲೆ ನಿಂತು, ಕೆಳಗೆ ಬಿದ್ದಿರುವ ಬಡಜನರನ್ನು ಉದ್ಧರಿಸುವ ವಿಚಾರವನ್ನು ಕುರಿತು ನಮಗೆ ವಿವೇಕವನ್ನು ಹೇಳು ತ್ತಿರುವುದು. ಅತ್ಯಂತ ಉಪಯೋಗವಾಗುವ ಜನರ ಸೇವೆಯನ್ನು ಸಮಾಜವು ಮೇಲೆ ಮೇಲೆ ತಿರಸ್ಕರಿಸಿ ಧಿಕ್ಕರಿಸುತ್ತಿರುವುದನ್ನು ನೋಡಿದರೆ ನಮಗೆ ಅಂತಹ ಸಮಾಜವನ್ನು ತುಚ್ಛೀಕರಿಸಿ ನೋಡು ವಷ್ಟು ಕೋಪವೇ ಬರುವುದು. ಜೀನ್ ವಾಲ್ಜೀನನನ್ನು ಹಳೆಯ ಹಗ್ಗದಿಂದ ಎಳೆಗಳನ್ನು ತೆಗೆಯುವ ಕೆಲಸಕ್ಕೆ ಇಡುವುದೂ, ಗೆಲಿಲಿಯೋನನ್ನು ಸೆರೆಮನೆಗೆ ಸೇರಿಸುವುದೂ, ಕ್ರಿಸ್ತನನ್ನು ಸಿಲುಬೆಗೇರಿಸುವುದೂ ಇವೆಲ್ಲವೂ ಸಮಾಜವು ವಹಿಸಬಹುದಾದ ಕಾರ್ಯಗಳೇ?

ಈ ಪುಸ್ತಕದಲ್ಲಿ ಸಂಬಳಾರದಂತಹ ಭಯಂಕರ ವಿಷಯ ಗಳು ಅಲ್ಲಲ್ಲಿ ಪದೇ ಪದೇ ಕಾಣುವುವು. ಹೀಗೆ ನಮಗೆ ಅದರಲ್ಲಿ ಕಂಡುಬರುವ ಭಯಾನಕ ವಿಷಯುಗಳನ್ನು ನೋಡಿದರ, ಮಾನುಷ ವಾದ ಅಥವಾ ದೈವಿಕವಾದ ಪ್ರತಿಯೊಂದು ವಿಷಯುವನ್ನೂ, ಅದು ಒಳ್ಳೇಯದಾಗಲಿ ಕೆಟ್ಟುದಾಗಲಿ, ತನ್ನ ಭಯಂಕರ ಹಿಂಸಾಚಕ್ರ ಗಳ ನಡುವೆ ಸಿಕ್ಕಿಸಿಕೊಂಡು, ಅಜ್ಞಾನದಿಂದ ವಿವೇಚನೆಯಿಲ್ಲದೆ ಹರಿಹರಿದು ಕತ್ತರಿಸುತ್ತಿರುವ ಲೌಕಿಕ ನ್ಯಾಯದ ಭೀಕರತೆಯು ಅವುಗಳಲ್ಲಿ ಕಾಣುತ್ತಿರುವುದು. ಈ ಭೀಕರತೆಯು ಕೆಲವು ವೇಳೆ ರೂಪುಗೊಂಡು ನಮ್ಮ ಮೇಲೆ ಹಾರಿ ಬೀಳುವುದು ; ಕುಕ್ಕರಿಸಿ ಕುಳಿತ್ತಿದ್ದ ಭಿಕ್ಷುಕನು ತಲೆಯೆತ್ತಿ ನೋಡಿದಾಗ ಜೀನ್ ವಾಲ್ಜೀ ನನು ಬೀದಿಯ ದೀಪದ ಬೆಳಕಿನಲ್ಲಿ ಆ ಪತ್ತೇದಾರನ ಗುರುತು

ಹಿಡಿದುದೂ, ಗಸ್ತಿನವನ ಲಾಂದ್ರದ ಬೆಳಕು ಹಠಾತ್ತಾಗಿ ಚರಂಡಿಯ ಕತ್ತಲೆಯಲ್ಲಿ ಹೊಳೆದು ಬೆಳಕಾದುದೂ, ಅಥವಾ ಪಲಾಯನ ಮಾಡಿದ್ದ ಅಪರಾಧಿಯು ಕಟ್ಟಕಡೆಗೆ ಸಾಯಂಕಾಲದಲ್ಲಿ ನಿಶ್ಯಬ್ದವಾಗಿದ್ದ ಆ ನದೀ ತೀರಕ್ಕೆ ಬಂದು, ಅಲ್ಲಿಯೂ ದುರುದ್ದೇಶದಿಂದ ಕಾದಿದ್ದು ಕಡೆಗೆ ಧರ್ಮ ಮಾರ್ಗಕ್ಕೆ ತಿರುಗಿದ ಗ್ರಾಮ ರಕ್ಷಕ (Police) ನನ್ನು ಕಂಡುದೂ, ಇವೆಲ್ಲವೂ ಮೇಲೆ ಹೇಳಿದ ಭೀಕರತೆಗೆ ನಿದರ್ಶನಗಳಾಗಿವೆ. ಪುಸ್ತಕವೆಲ್ಲವೂ ಹಿಂಸೆ ಪರಪೀಡನೆಗಳ ವಿಷಯಗಳಿಂದಲೂ, ಆ ಹಿಂಸಾ ಪೀಡನೆಗಳಿಗೆ ಕಾರಣವಾದ ದುರಭಿಪ್ರಾಯಗಳಿಂದಲೂ, ತುಂಬಿ ತುಳುಕಾಡುತ್ತಿದೆ. ಜಿಲ್ಲೆನಾರ್ಮಂಡನ ದುರಭಿಪ್ರಾಯಗಳೂ, ಮೇರಿಯುಸ್ಸನ ದುರಭಿಪ್ರಾಯಗಳೂ, ಬ್ಯಾರಿಕೇಡ್ ಎಂಬ ಅಡ್ಡ ಗೋಡೆಯನ್ನು ಶತ್ರುಗಳ ವಶವಾಗದಂತೆ ಕಾಪಾಡಿಕೊಳ್ಳುವುದಕ್ಕಾಗಿ ಉಂಟಾದ ದಂಗೆಯ ಸಂಬಂಧವಾದ ದುರಭಿಪ್ರಾಯಗಳೂ ಮತ್ತು ಅದನ್ನು ಲಗ್ಗೆ ಹತ್ತಿ ವಶಪಡಿಸಿಕೊಂಡು ಜಯಶಾಲಿಗಳಾದವರ ದುರಭಿಪ್ರಾಯಗಳೂ, ಇವೆಲ್ಲವೂ ಅದರಲ್ಲಿ ಸೇರಿವೆ. ಇದರ ಜೊತೆಗೆ, ಪೊಲೀಸು ಕೆಲಸವನ್ನು ನಿತ್ಯ ಕರ್ಮದಂತೆ ಭಾವಿಸಿ ನಡೆಯಿಸುತ್ತ, ಲೋಕವ್ಯವಹಾರ ನ್ಯಾಯಕ್ಕಿಂತಲೂ ಮೀರಿದ ಮತ್ತೊಂದು ಸತ್ಯವಿದೆಯೆಂದು ತನಗೆ ತಿಳಿದ ಕೂಡಲೇ ತಾನು ಜೀವಿಸಿರಬಾರದೆಂದು ಪ್ರಾಣವನ್ನು ನೀಗಿದ ಜೇವರ್ಟನ ಸ್ತುತ್ಯವಾದ ಮತ್ತು ನೀಚವಾಗಿ ಕಾಣುವ ಪಾತ್ರವೊಂದು ಈ ಕಥೆಯಲ್ಲಿದೆ. ಈ ಪಾತ್ರ ಸೃಷ್ಟಿಯು ಬಹಳ ಸಮಂಜಸವಾಗಿರುವುದಲ್ಲದೆ ಓದುಗರು ಸಾವಧಾನದಿಂದ ಆಲೋಚಿಸಿ ವಿಮರ್ಶಿಸಲರ್ಹವಾಗಿದೆ.

ಇಂತಹ ಕ್ಲೇಶಮಯ ವಿಷಯಗರ್ಭಿತವಾದರೂ ಈ ಮಹಾ ಗ್ರಂಥವು ಪ್ರೇಮ ತೇಜಸ್ಸಿನಿಂದ ಕೂಡಿ ಜೀವಕಳೆಯಿಂದ ತುಂಬಿದೆ. ಆ ದಯಾಶಾಲಿಯಾದ ಪಾದ್ರಿಯ ಚಿತ್ರವು ಆಧುನಿಕ ಕಾವ್ಯ ಪ್ರಪಂಚಕ್ಕೆ ಬಹು ಸಮಂಜಸವಾಗಿ ಕಾಣುವುದು. ಮಾಂಟ್‌ಫರ್ ಮೆಯಿಲಿನ ದೃಶ್ಯವೆಲ್ಲವೂ, ಮಕ್ಕಳಮೇಲೆ ಮಂತ್ರ

ಪ್ರಯೋಗಮಾಡಿದಂತೆ ಅವರನ್ನು ಆನಂದಪರವಶರನ್ನಾಗಿ ಮಾಡು ವುದರಲ್ಲಿ ನಿಪುಣನಾದ ಹ್ಯೂಗೊ ಕವಿಯ ಸಂಪೂರ್ಣ ಚಾತು ರ್ಯದಿಂದ ಕೂಡಿದೆ. ಕೋಸೆಟ್ಟಳನ್ನು ರಾತ್ರಿಯ ಕಾಲದಲ್ಲಿ ನೀರನ್ನು ಸೇದಿ ತರಲು ಕಳುಹಿಸಿದಾಗ ಅವಳು ದೀಪಗಳಿಂದಲಂಕರಿ ಸಲ್ಪಟ್ಟಿದ್ದ ಚಪ್ಪರವನ್ನು ನೋಡಿ ಆನಂದಪಡುತ್ತ ನಿಂತಿದ್ದುದೂ, ಅವಳ ಹಿಂದೆ ಅಲ್ಪನಾದ ಆ ಸತ್ರದ ಯಜಮಾನನು ಅವಳ ಮೇಲೆ ಸದಾ ಸರ್ವಾಧಿಕಾರ ನಡೆಯಿಸಬಲ್ಲ ದೇವರೇ ತಾನೆಂಬಂತೆ ನಿಂತಿ ದ್ದುದೂ ಉಕ್ತವಾಗಿರುವ ವರ್ಣನಾ ಭಾಗವನ್ನು ಯಾರು ತಾನೇ ಮರೆಯಲು ಸಾಧ್ಯವಾದೀತು ! ಈ ಗ್ರಂಥದಲ್ಲಿ ಹೇಳಿರುವುದಕ್ಕಿಂ ತಲೂ ಹೆಚ್ಚು ಹೃದಯದ್ರಾವಕವಾಗಿ ವಿಷಯಗಳನ್ನು ಷೇಕ್ಸ ಪಿಯರನೂ ತನ್ನ ಯಾವ ಗ್ರಂಥದಲ್ಲಿಯೂ ಹೇಳಿಲ್ಲ. ಮೇರಿಯಸ್ ಮತ್ತು ಕೋಸೆಟ್ಟರ ಮೋಹವು ಕೇವಲ ನಿಷ್ಕಲ್ಮಷವಾಗಿಯೂ ಮನೋಹರವಾಗಿಯೂ ಕಾಣುತ್ತಿದೆ. ಒಟ್ಟಿನಲ್ಲಿ ಈ ಗ್ರಂಥಕ್ಕೆ ಸಮಾನವಾದ ಗ್ರಂಥಗಳು ಲೋಕದಲ್ಲಿ ಇಲ್ಲವೆಂದೇ ಹೇಳಬೇಕು. ಇದರಲ್ಲಿ ಹ್ಯೂಗೊ ಕವಿಯ ಪರಿಪೂರ್ಣ ಶಾಂತತೆಯೂ ಗಾಂಭೀರ್ಯವೂ ತುಂಬಿರುವುವು. 'ನೋಟರ್ಡೇಂ' ಗ್ರಂಥದ ಅಂದವನ್ನು ಕೆಡಿಸಿರುವ ಪ್ರಬಲ ರಸೋದ್ರೇಕದ ಒರಟಾದ ಭಾವಗಳು ಇದರಲ್ಲಿಲ್ಲ. ಇದರಲ್ಲಿ, ಸಂಪೂರ್ಣವಾಗಿ ಅಸಂಭವ ವೆಂದು ಕಂಡು, ಓದುಗರಿಗೆ ಬೇಸರವಾಗುವಂತಹ ವಿಷಯ ಗಳು ಇರುವುದೇನೋ ನಿಜ. ಆದರೂ ಕಥೆಯು ಮಾತ್ರ ಬಹಳ ಚಾತುರ್ಯದಿಂದ ಕಲ್ಪಿತವಾಗಿದೆ. ಓದುವವರಿಗೆ ದಿಕ್ಕು ತೋರದಂತಾಗುವುದು ಮಾತ್ರವಲ್ಲದೆ, ಅದರಲ್ಲಿ ಉಕ್ತವಾಗಿರುವ ಪ್ರತಿಯೊಂದು ಪಾತ್ರವೂ ಸಮಯಕ್ಕೆ ತಕ್ಕಂತೆ ಹೊಂದಿಕೊಂಡು, ಎಲ್ಲ ಮುಖಗಳ ಮೇಲೆಯೂ ಸರಿಯಾಗಿ ಕುಳಿತುಕೊಳ್ಳುವ ಆರು ಮುಖದ ಘನದಂತೆ (Kaleidoscope) ಉಪ ಯೋಗವಾಗಿರುವುದನ್ನು ನೋಡಿದರೆ ಇದು ನಿಜವೆಂದು ನಂಬ ಲಾಗದಂತಿರುವುದು. ಇದರಲ್ಲಿ ಹೇಳಿರುವಷ್ಟು ಹೊಂದಿಕೆಯಾಗಿ

ಮನುಷ್ಯನ ಜೀವಮಾನದಲ್ಲಿ ಸಂದರ್ಭಗಳು ಏರ್ಪಡುವುದಿಲ್ಲ. ಕೆಲವು ಕಡೆಗಳಲ್ಲಿ ಮುಖ್ಯ ವಿಷಯವನ್ನು ಬಿಟ್ಟು ಉಪವಿಷಯಗಳ ಕಡೆಗೆ ಹೆಚ್ಚು ಗಮನಕೊಟ್ಟು ಬರೆದಿರುವುದೂ ಸಹ ಸಮಯೋಚಿತವಾಗಿ ಕಾಣುವುದಿಲ್ಲ. ಇದರಿಂದ ಕಥಾಸರಣಿಗೆ ಭಂಗ ಬಂದು ಮನಸ್ಸಿಗೆ ಬೇಸರವೂ ಕೋಪವೂ ಬರುವುದೇ ಹೊರತು ಮತ್ತೆ ಯಾವ ಪ್ರಯೋಜನವೂ ಇಲ್ಲ. ಆದರೆ ಎಲ್ಲ ವಿಷಯಗಳನ್ನೂ ಒಟ್ಟುಗೂಡಿಸಿ ಹೇಳುವುದಾದರೆ ಈ ಗ್ರಂಥವು ಮಹಾ ಕವಿಯ ಭಾವಗಳಿಂದ ಗರ್ಭಿತವಾಗಿ, ಸಂಪೂರ್ಣ ಕಲಾ ನಿಪುಣನ ವರ್ಣನಾದಿಗಳ ವಿಸ್ತೃತಿಯನ್ನು ಪಡೆದು, ಕರುಣ ರಸದಿಂದಲೂ, ಸತ್ಯ ವಿಚಾರಗಳಿಂದಲೂ ಪ್ರೌಢ ವಾಕ್ಸರಣಿಯಿಂದಲೂ ತುಂಬಿ ತುಳುಕುತ್ತಿದೆ.'

ಸ್ವಿನ್‌ಬರ್ನ್ ಕವಿಯು ಈ 'ಲೆ ಮಿಸರಾಬಲ್ಸ್' ಗ್ರಂಥವನ್ನು ಕುರಿತು, 'ಈವರೆಗೆ ಕವಿಗಳು ಆಲೋಚಿಸಿ ಬರೆದಿರುವ ಕಲ್ಪಿತ ಕಥೆಗಳಲ್ಲೆಲ್ಲ ಇದೇ ಅತ್ಯಂತ ಶ್ರೇಷ್ಠವಾದ ರಸೋತ್ಪಾದಕ ಮಹಾ ಕಾವ್ಯವು. ಮತ್ತು, ಇದು ತನ್ನ ಪೂರ್ವ ಸ್ಥಿತಿಯನ್ನಳಿದು ಸಂಪೂರ್ಣ ವ್ಯತ್ಯಾಸವಾಗಿ, ಪಾಪ ವಿಮೋಚನೆ ಹೊಂದಿ, ಧೀರತನದ ಕಾರ್ಯಗಳಿಂದ ಪರಿಶುದ್ಧವಾಗಿ, ಮಹಾ ಕಷ್ಟಾನುಭವದಿಂದ ಕೀರ್ತಿಪ್ರಕಾಶವನ್ನು ಪಡೆದ ಒಂದು ಪ್ರಾಣಿಯ ವಿಷಯಕವಾದ ಮಹಾ ಕಾವ್ಯವು. ಇದು ಜೀವನದ ಸುಖದುಃಖಗಳನ್ನು ಅತ್ಯುತ್ಕಟ ರೀತಿಯಿಂದ ಪ್ರತ್ಯಕ್ಷಗೊಳಿಸಿರುವ ಮತ್ತು ಮಾನವರಲ್ಲಿ ಅತ್ಯುಚ್ಚತಮ ಗುಣಶಾಲಿಗಳೂ, ಅತ್ಯಂತ ಹೇಯಗುಣಗಳುಳ್ಳ ನೀಚರೂ ಈ ಉಭಯರ ರೀತಿಗಳನ್ನೂ ಚಿತ್ರಿಸಿ ತೋರಿಸಿರುವ ಗ್ರಂಥವಾಗಿದೆ,' ಎಂಬದಾಗಿ ಹೇಳಿರುವನು.

---

# ಪಾಪಿಯ ಪಾಡು

---

೧

ನೂರು ವರ್ಷಗಳಿಗಿಂತಲೂ ಹಿಂದೆ ಫ್ರಾನ್ಸ್ ದೇಶದಲ್ಲಿ ಜೀನ್ ವಾಲ್ಜೀನನೆಂಬ ಒಬ್ಬ ಕಷ್ಟಜೀವಿಯಾದ ರೈತನು, ಆಹಾರ ವಿಲ್ಲದೆ ಸಾಯುತ್ತಿದ್ದ ತನ್ನ ತಂಗಿಯ ಮಕ್ಕಳಿಗಾಗಿ ಒಂದು ರೊಟ್ಟಿಯನ್ನು ಕದ್ದು ತಂದನು. ಇದಕ್ಕಾಗಿ ಇವನಿಗೆ ಐದುವರ್ಷಗಳ ಕಠಿಣ ಶಿಕ್ಷೆಯನ್ನು ವಿಧಿಸಿ 'ಗ್ಯಾಲಿ' ಎಂಬ ನಾವೆಗೆ ಕಳುಹಿಸಿದರು. 'ಗ್ಯಾಲಿ' ಎಂದರೆ, ಸಮುದ್ರದ ಮೇಲೆ ಅನೇಕ ಮಂದಿ ಬಂದಿವಾನರುಗಳಿಂದ ನಡೆಯಿಸಲ್ಪಡುತ್ತಿದ್ದ ಒಂದುದೊಡ್ಡ ದೋಣಿ. ಪ್ರತಿಯೊಬ್ಬ ಖೈದಿಗೂ ಕಾಲಿಗೆ ಭಾರ ವಾದ ಕಬ್ಬಿಣದ ಬೇಡಿಯನ್ನು ಹಾಕಿ ಅದನ್ನು ಬಲವಾದ ಕಬ್ಬಿಣದ ಸರಪಣಿಯಿಂದ ಅವನು ಕುಳಿತಿದ್ದ ಸ್ಥಳಕ್ಕೆ ಕಟ್ಟಿರುತ್ತಿದ್ದರು. ಈ ಬಡ ಖೈದಿಗಳಿಗೆ ಅತಿ ನಿಕೃಷ್ಟವಾದ ಆಹಾರವನ್ನೂ ಬಲು ಕೀಳುತರದ ಉಡುಪನ್ನೂ ಕೊಡುತ್ತಿದ್ದುದಲ್ಲದೆ, ಅವರು ಶ್ರಮಪಟ್ಟು ದೋಣಿಯನ್ನು ನಡೆಯಿಸುವುದು ಸ್ವಲ್ಪ ಕಡಿಮೆ ಯಾದರೂ ನಿಷ್ಕರುಣದಿಂದ ಹೊಡೆದು ಹೊಡೆದು ಚಚ್ಚುತ್ತಿದ್ದರು. ಜೀನ್ ವಾಲ್ಜೀನನು ನಾಲ್ಕು ಸಲ ತಪ್ಪಿಸಿಕೊಂಡೋಡಿಹೋಗಲು ಪ್ರಯತ್ನಪಟ್ಟನು. ಇದರಿಂದ ಇವನ ಶಿಕ್ಷೆಯು ಹತ್ತೊಂಭತ್ತು ವರ್ಷಗಳವರೆಗೂ ಹೆಚ್ಚಿತು. ಕಠಿಣ ಶಿಕ್ಷೆಯೂ, ಸರಿಯಾದ ಅನ್ನ ಪಾನಗಳ ಅಭಾವವೂ, ಕಷ್ಟಮಯವಾದ ಪ್ರವಾಸವೂ ಸಹ ಇವನನ್ನು ಕೇವಲ ಪಶುವಿನಂತೆ ಮಾಡಿಬಿಟ್ಟಿದ್ದುವು.

ಬಿಡುಗಡೆಯಾದ ಮೇಲೆ ಇವನು ಮನೆಮನೆಗೂ ಅಲೆಯುತ್ತ ಕಡೆಗೆ ಒಬ್ಬ ಪಾದ್ರಿಯ ಮನೆಗೆ ಬಂದು ಬಾಗಿಲನ್ನು ತಟ್ಟಿದನು. 'ಒಳಗೆ ಬರಬಹುದು,' ಎಂಬ ಧ್ವನಿಯು ಕೇಳಿಬಂದಿತು. ಒಳಗೆ ಹೊಗಿ, ಒಂದು ಹೆಜ್ಜೆಯನ್ನಿಟ್ಟು, ಬಾಗಿಲನ್ನು ಮುಚ್ಚದೆ, ಹಾಗೆಯೇ ಸ್ವಲ್ಪ ಅನುಮಾನಿಸಿ ನಿಂತನು. ಬೆನ್ನಿನ ಮೇಲೆ ಇವನ ಚೀಲವೂ ಕೈಯಲ್ಲಿ ದೊಣ್ಣೆಯೂ ಇದ್ದುವು. ದಣಿದಿದ್ದ ಇವನ ದೃಷ್ಟಿಯು ಕ್ರೂರವಾಗಿಯೂ, ಕಣ್ಣುಗಳು ಕೆಂಡದಂತೆ ಭಯಂಕರವಾಗಿಯೂ ಇದ್ದುವು. ಇವನ ಈ ಲಕ್ಷಣಗಳಿಂದ ಅಲ್ಲಿನ ಜನರಿಗೆ ಅಪಶಕುನದಂತೆ ಭಯಸೂಚನೆಯಾಯಿತು.

ಮನೆಯ ಯಜಮಾನಿಯಾದ ಮೇಡೆಮ್ ಮೆಗ್ಲೊಯಿರಳು ಮಿತಿಮೀರಿದ ಭಯದಿಂದ ದಿಕ್ಕು ತೋರದೆ, ಕಿರಿಚಿಕೊಳ್ಳುವುದಕ್ಕೂ ಶಕ್ತಿಯಿಲ್ಲದೆ, ಗಡಗಡನೆ ನಡುಗುತ್ತ ಬಾಯಿ ತೆರೆದು ನಿಂತುಬಿಟ್ಟಳು.

ಈ ಮನುಷ್ಯನು ಬಂದುದನ್ನು ಮೇಡೆಮ್ ಬ್ಯಾಪ್ಟಿಸ್ಟೈನಳು ನೋಡಿ ಬೆದರಿ ಬೆಚ್ಚಿದಳು. ಮೆಲ್ಲನೆ ಹಿಂದಿರುಗಿ ತನ್ನ ಅಣ್ಣನ ಮುಖವನ್ನು ನೋಡಿ ಎಂದಿನಂತೆ ಶಾಂತಳಾದಳು.

ಪಾದ್ರಿಯು ಮಾತ್ರ ಈ ಹೊಸಬನನ್ನು ಪರಮ ಶಾಂತ ದೃಷ್ಟಿಯಿಂದ ನೋಡಿದನು.

ಈ ಅಪರಿಚಿತನಿಗೆ ಏನು ಬೇಕಾಗಿತ್ತೆಂದು ಕೇಳಲು, ಆತನು ಬಾಯಿ ತೆರೆದಾಗಲೇ, ಹೊಸಬನು ಎರಡು ಕೈಗಳನ್ನೂ ತನ್ನ ದೊಣ್ಣೆಯಮೇಲೆ ಊರಿನಿಂತು, ಅಲ್ಲಿದ್ದವರನ್ನು ಒಬ್ಬೊಬ್ಬರನ್ನಾಗಿ ನೋಡಿ, ಪಾದ್ರಿಯು ಮಾತನಾಡುವುದಕ್ಕೆ ಮೊದಲೇ, ಉಚ್ಚಸ್ವರದಿಂದ, 'ಇದೋ ನೋಡಿ, ನನ್ನ ಹೆಸರು ಜೀನ್ ವಾಲ್ಜೀನ್; ನಾನೊಬ್ಬ ಶಿಕ್ಷೆಯನುಭವಿಸಿದ ಅಪರಾಧಿಯು. ಹತ್ತೊಂಭತ್ತು ವರ್ಷಗಳು ಗ್ಯಾಲಿ ನಾವೆಯಲ್ಲಿ ಶಿಕ್ಷೆಯನ್ನನುಭವಿಸಿ ಬಂದಿರುವೆನು. ನನಗೆ ಬಿಡುಗಡೆಯಾಗಿ ನಾಲ್ಕು ದಿನಗಳಾದುವು. ಈಗ ಪಾಂಟಾರ್ಲಿಯರ್ ಎಂಬ ನನ್ನ ಸ್ಥಳಕ್ಕೆ

ಹೋಗುತ್ತಿರುವೆನು. ನಾಲ್ಕು ದಿನಗಳೂ ನಡೆದು ಟೂಲಾನ್ ಪಟ್ಟಣದಿಂದ ಬಂದೆನು. ಈ ದಿನ ಮುವತ್ತಾರು ಮೈಲಿಗಳನ್ನು ನಡೆದಿರುವೆನು. ಈ ದಿನ ಸಾಯಂಕಾಲ ನಾನು ಈ ಊರಿಗೆ ಬಂದಾಗ ಒಂದು ಸತ್ರಕ್ಕೆ ಹೋದೆನು. ನಾನು ಸರಕಾರದ ಆಜ್ಞೆಯಂತೆ ಗ್ರಾಮಾಧಿಕಾರಿಗೆ ತೋರಿಸಿ ನನ್ನ ಹತ್ತಿರವಿಟ್ಟು ಕೊಂಡಿದ್ದ ಹಳದಿ ಬಣ್ಣದ ಅಪ್ಪಣೆ ಚೀಟಿಯನ್ನು (passport) ಆ ಸತ್ರದ ಜನರು ನೋಡಿ ನನ್ನನ್ನು ಹೊರಗೆ ಕಳುಹಿಸಿಬಿಟ್ಟರು. ಅನಂತರ ಮತ್ತೊಂದು ಸತ್ರಕ್ಕೆ ಹೋದೆನು. ಅವರೂ ಸಹ "ನಡೆ, ಆಚೆಗೆ ಹೋಗು," ಎಂದು ಗರ್ಜಿಸಿ ಕಳುಹಿಸಿದರು. ಎಲ್ಲೆಲ್ಲಿಯೂ ಹೀಗೆಯೇ ಆಯಿತು. ಯಾರೂ ನನಗಾಶ್ರಯ ಕೊಡರು. ಬಂದೀಖಾನೆಗೆ ಹೋದೆನು. ಅಲ್ಲಿನ ಕಾವಲುಗಾರನು ನನ್ನನ್ನು ಒಳಗೆ ಬಿಡಲಿಲ್ಲ. ಬೀದಿಯ ಚೌಕದಲ್ಲಿ ಒಂದು ಬಂಡೆಯಮೇಲೆ ಮಲಗಿಕೊಂಡಿದ್ದೆನು. ಪುಣ್ಯಾತ್ಮಳೊಬ್ಬಳು ನಿಮ್ಮ ಮನೆಯನ್ನು ತೋರಿಸಿ, "ಬಾಗಿಲನ್ನು ತಟ್ಟು," ಎಂದು ಹೇಳಿದಳು. ಅದರಂತೆ ಇಲ್ಲಿಗೆ ಬಂದು ಬಾಗಿಲನ್ನು ತಟ್ಟಿದೆನು. ಈ ಸ್ಥಳವು ಯಾವುದು? ಇದು ಸತ್ರವೇ? ನೀವು ಇಲ್ಲಿಯ ಅಧಿಕಾರಿಗಳೇ? ನನ್ನಲ್ಲಿ ಹಣ ಇದೆ. ನಾನು ಹತ್ತೊಂಭತ್ತು ವರ್ಷಗಳು ನಾವೆಯಲ್ಲಿ ಕಷ್ಟಪಟ್ಟು ಕೆಲಸಮಾಡಿ ಸಂಪಾದಿಸಿ ಕೂಡಿಟ್ಟಿರುವ ಒಂದು ನೂರ ಒಂಭತ್ತು ಫ್ರಾಂಕುಗಳು ಹದಿನೈದು ಸೌಗಳು (ಸುಮಾರು ಅರವತ್ತೊಂದು ರೂಪಾಯಿಗಳು) ಇದೋ ಇಲ್ಲಿಯೇ ಇವೆ. ನನಗಿನ್ನೇನಾಗ ಬೇಕು! ನಾನು ಬಹಳ ದಣಿದಿದ್ದೇನೆ. ಮೂವತ್ತಾರು ಮೈಲಿಗಳ ದೂರ ನಡೆದು ನನಗೆ ಬಹಳ ಹಸಿವಾಗಿದೆ. ನಾನು ಇಲ್ಲಿ ತಂಗಬಹುದೇ?' ಎಂದನು.

ಪಾದ್ರಿಯು, ಯಜಮಾನಿಯಾದ ಮೆಗ್ಲೊಯಿರಳ ಕಡೆಗೆ ನೋಡಿ, 'ಇನ್ನೊಂದು ತಟ್ಟೆಗೆ ಊಟವನ್ನು ಅಣಿಮಾಡು,' ಎಂದನು.

ಊಟಮಾಡುವ ಸಮಯದಲ್ಲಿ ಈ ಸಂಭಾಷಣೆ ನಡೆಯಿತು:

ಜೀನ್ ವಾಲ್ಜೀನನು, 'ಸ್ವಾಮಿ, ತಾವು ಬಹಳ ಒಳ್ಳೆಯವರು. ನನ್ನನ್ನು ತುಚ್ಛವಾಗಿ ಕಾಣಲಿಲ್ಲ. ನನ್ನನ್ನು ನಿಮ್ಮ ಮನೆಗೆ ಬರಮಾಡಿಕೊಂಡು ಗೌರವಿಸಿದಿರಿ. ಆದರೂ ನಾನು ಎಲ್ಲಿಂದ ಬಂದೆನೆಂಬುದನ್ನೂ ನಾನು ಇಂತಹ ದುರದೃಷ್ಟಶಾಲಿ ಎಂಬುದನ್ನೂ ನಿಮ್ಮಲ್ಲಿ ಮರೆಮಾಚದೆ ಹೇಳಿಬಿಟ್ಟೆನು,' ಎಂದನು.

ಬಳಿಯಲ್ಲಿಯೇ ಕುಳಿತಿದ್ದ ಪಾದ್ರಿಯು ಮೆಲ್ಲನೆ ಅವನ ಕೈಯನ್ನು ಮುಟ್ಟಿ, 'ಅಯ್ಯಾ, ನೀನು ಯಾರೆಂಬುದನ್ನು ನೀನೇನೋ ನನಗೆ ತಿಳಿಸಿದೆ. ಇದು ನನ್ನ ಮನೆಯಲ್ಲ. ಇದು ಪರಮೇಶ್ವರನ ಭವನವು. ಇಲ್ಲಿಗೆ ಬರತಕ್ಕವರು ಕೀರ್ತಿವಂತರೋ ಅನಾಮಧೇಯರೋ, ಸುಖಿಗಳೋ ದುಃಖಿಗಳೋ, ಎಂಬುದೊಂದನ್ನೂ ಈ ಮನೆಯಲ್ಲಿ ವಿಚಾರಿಸುವ ಪದ್ಧತಿ ಇಲ್ಲ. ನಿನ್ನ ಹೆಸರನ್ನು ಕೇಳಿ ತಿಳಿದುಕೊಳ್ಳುವುದರಿಂದ ನನಗಾಗುವುದೇನು? ಅಲ್ಲದೆ, ನೀನು ಹೇಳುವುದಕ್ಕೆ ಮೊದಲೇ ನಿನಗಿರುವ ಹೆಸರೊಂದನ್ನು ನಾನು ತಿಳಿದಿದ್ದೆನು,' ಎಂದನು. ಆಗ ಜೀನ್ ವಾಲ್ಜೀನನು ಆಶ್ಚರ್ಯದಿಂದ ಕಣ್ಣನ್ನರಳಿಸಿ, 'ನಿಜವಾಗಿಯೂ ನನ್ನ ಹೆಸರು ನಿಮಗೆ ಗೊತ್ತಿದ್ದಿತೇ?' ಎಂದನು.

ಪಾದ್ರಿಯು, 'ಅಹುದು, ನಿನಗೆ ನನ್ನ ಸಹೋದರನೆಂದು ಹೆಸರು,' ಎಂದನು.

ಊಟ ಉಪಚಾರಗಳು ಮುಗಿದು ಎಲ್ಲರೂ ಮಲಗಿದರು. ಅರ್ಧರಾತ್ರಿಯಲ್ಲಿ ಜೀನ್ ವಾಲ್ಜೀನನು ಎಚ್ಚರಗೊಂಡು, ತನ್ನಲ್ಲಿ ತಾನು ಬಹಳವಾಗಿ ಮನಸ್ಸಿನ ಆಲೋಚನಾ ತರಂಗಗಳಲ್ಲಿ ಹೊಡೆದಾಡಿ, ಒದ್ದಾಡಿ, ಕಡೆಗೆ, ಆ ರಾತ್ರಿಯ ಊಟದಲ್ಲಿ ಉಪಯೋಗಿಸಿದ್ದ ಬೆಳ್ಳಿಯ ಚಮಚಗಳನ್ನೂ ಫೋರ್ಕುಗಳನ್ನೂ ಕದ್ದುಕೊಂಡು ಹೋಗಬೇಕೆಂಬ ದುರಾಶೆಗೆ ವಶನಾಗಿ ಅವುಗಳನ್ನು ಕದ್ದು ಮಾಯವಾದನು. ಮಾರನೆಯ ದಿನ ಸಿಪಾಯಿಗಳು ಇವನನ್ನು ಹಿಡಿದು ಪಾದ್ರಿಯ ಎದುರಲ್ಲಿ ತಂದು ನಿಲ್ಲಿಸಿದರು. ಪಾದ್ರಿಯು ಅವನನ್ನು ಶಿಕ್ಷೆಯಿಂದ ತಪ್ಪಿಸಬೇಕೆಂದು ನಿಶ್ಚಯಿಸಿ ಆ ಬೆಳ್ಳಿಯ



ಮಾರನೆಯ ದಿನ ಸಿಪಾಯಿಗಳು
ಜೀನ್ ವಾಲ್ಜೀನನನ್ನು ಹಿಡಿದು ಪಾದ್ರಿಯ ಎದುರಲ್ಲಿ ನಿಲ್ಲಿಸಿದರು

ಪದಾರ್ಥಗಳನ್ನು ತಾನೇ ಅವನಿಗೆ ಕೊಟ್ಟಿದ್ದೆನೆಂದು ಆ ರಾಜಾಧಿಕಾರಿಗಳಿಗೆ ನಂಬಿಕೆ ಹುಟ್ಟುವಂತೆ ಹೇಳಿದನು.

ಅನಂತರ ಜೀನ್ ವಾಲ್ಜೀನನ ಕಡೆ ನೋಡಿ, 'ಓಹೋ! ಇದೇನು! ನೀನೇ? ನಿನ್ನನ್ನು ನೋಡಿ ನನಗೆ ಬಹಳ ಸಂತೋಷವಾಯಿತು. ಇದೇನು! ನಾನು ನಿನಗೆ ಆ ಬೆಳ್ಳಿಯ ಮೇಣದ ಬತ್ತಿಯಿಡುವ ಕೊಳವೆಯನ್ನೂ ಇವುಗಳ ಜೊತೆಯಲ್ಲಿಯೇ ಕೊಟ್ಟಿದ್ದೆನಲ್ಲಾ! ಇವೆಲ್ಲವನ್ನೂ ಮಾರಿದ್ದರೆ ನಿನಗೆ ಇನ್ನೂರು ಫ್ರಾಂಕುಗಳಾದರೂ ಸಿಕ್ಕುತ್ತಿದ್ದುವು. ಇವುಗಳ ಜೊತೆಯಲ್ಲಿ ಅದನ್ನೇತಕ್ಕೆ ತೆಗೆದುಕೊಂಡು ಹೋಗಲಿಲ್ಲ?' ಎಂದನು.

ಆಗ ಜೀನ್ ವಾಲ್ಜೀನನು ಕಣ್ಣುಗಳನ್ನು ಚೆನ್ನಾಗಿ ತೆರೆದು, ಮಾನ್ಯನಾದ ಆ ಪಾದ್ರಿಯನ್ನು ತನ್ನ ಮನಸ್ಸಿನಲ್ಲಿ ಉಂಟಾದ ಯಾವುದೋ ವರ್ಣಿಸಲಾಗದ ಒಂದು ಭಾವವನ್ನು ವ್ಯಕ್ತಪಡಿಸುವ ದೃಷ್ಟಿಯಿಂದ ಎವೆಯಿಕ್ಕದೆ ನೋಡಿದನು.

ರಾಜಾಧಿಕಾರಿ—(ಪಾದ್ರಿಯನ್ನು ನೋಡಿ) ಸ್ವಾಮಿ! ಹಾಗಾದರೆ ಇವನು ಹೇಳಿದ ಮಾತು ನಿಜವೆಂದೇ ಆಯಿತಲ್ಲವೆ? ಇವನನ್ನು ಸಂಧಿಸಿದಾಗ ಇವನು ತಪ್ಪಿಸಿಕೊಂಡೋಡಿಹೋಗುವನಂತೆ ಇವನ ನಡಿಗೆಯಿಂದ ಕಂಡುಬಂದಿತು. ವಿಷಯವೇನಿರಬಹುದೆಂದು ವಿಚಾರಿಸುವುದಕ್ಕಾಗಿ ಇವನನ್ನು ಹಿಡಿದು ನಿಲ್ಲಿಸಿದೆವು. ಇವನಲ್ಲಿ ಈ ಬೆಳ್ಳಿಯ ಪದಾರ್ಥಗಳಿದ್ದುವು.

ಪಾದ್ರಿ—(ಮುಗುಳ್ನಗೆಯಿಂದ) ಹಾಗಾದರೆ, ಈ ವಸ್ತುಗಳನ್ನು ತನಗೆ ನಿನ್ನೆಯ ರಾತ್ರಿ ಆಶ್ರಯವನ್ನು ಕೊಟ್ಟಿದ್ದ ಒಬ್ಬ ದಯಾಶಾಲಿಯಾದ ಮುದಿ ಪಾದ್ರಿಯು ಕೊಟ್ಟನೆಂದು ಹೇಳಿರಬಹುದು! ವಿಷಯವೇನೆಂಬುದು ಈಗ ತಿಳಿದಂತಾಯಿತು. ನೀವು ಇವನನ್ನು ಹಿಂದಕ್ಕೆ ಕರೆತಂದಿರುವಿರಲ್ಲವೆ? ಇದು ಅನ್ಯಾಯ.

ರಾಜಾಧಿಕಾರಿ—ಹೀಗಿರುವುದಾದರೆ ನಾವು ಇವನನ್ನು ಬಿಟ್ಟುಬಿಡುವೆವು.

ಪಾದ್ರಿ—ಓಹೊ! ಖಂಡಿತವಾಗಿಯೂ ಬಿಡಬೇಕು.

ಸಿಪಾಯಿಗಳು ಜೀನ್ ವಾಲ್ಜೀನನನ್ನು ಬಿಟ್ಟುಬಿಟ್ಟರು.

ಜೀನ್ ವಾಲ್ಜೀನ್–(ಸಿದ್ದೆಗಣ್ಣಿನಿಂದ ಮಾತನಾಡುವವನಂತೆ ಕುಂಠಿತ ಸ್ವರದಿಂದ) ನನ್ನನ್ನು ಬಿಡುಗಡೆ ಮಾಡುವುದು ನಿಜವೇನು?

ಒಬ್ಬ ಸಿಪಾಯಿ—ಅಹುದು. ನಿನಗೆ ಬಿಡುಗಡೆಯಾಗಿದೆ. ಅದು ನಿನಗೆ ಅರ್ಥವಾಗಲಿಲ್ಲವೆ?

ಪಾದ್ರಿ — (ಜೀನ್ ವಾಲ್ಜೀನನನ್ನು ನೋಡಿ) ಮಿತ್ರಾ! ಇದೋ, ನಿನ್ನ ಮೋಂಬದ ಬತ್ತಿಯ ಕೊಳವೆಯು. ನೀನು ಹೋಗು ವಾಗ ಇದನ್ನು ಮರೆಯದೆ ತೆಗೆದುಕೊಂಡು ಹೋಗು.

ಎಂದು ಹೇಳಿ ಪಾದ್ರಿಯು ಆ ಬೆಳ್ಳಿಯ ಕೊಳವೆಯನ್ನು ತಂದು ಜೀನ್ ವಾಲ್ಜೀನನಿಗೆ ಕೊಟ್ಟನು.

ಅವನ ಮೈನರಗಳೆಲ್ಲವೂ ನಡುಗಿಹೋದವು. ದಿಕ್ಕು ತೋರದೆ ಹುಚ್ಚನಂತೆ ನೋಡುತ್ತ ಸುಮ್ಮನೆ ಅದನ್ನು ಕೈಗೆ ತೆಗೆದುಕೊಂಡನು.

ಸಿಪಾಯಿಗಳು ಹೊರಟುಹೋದರು.

ಪಾದ್ರಿಯು ಸಮೀಪಕ್ಕೆ ಒಂದು, ಮೃದುವಾದ ಸ್ವರದಿಂದ ಮೆಲ್ಲನೆ, 'ತಮ್ಮಾ, ಜೀನ್ ವಾಲ್ಜೀನ್, ಇನ್ನು ನಿನಗೆ ಪಾಪವಿಲ್ಲ. ಪುಣ್ಯಶೀಲನಾದೆ. ನಿನ್ನ ಆತ್ಮವನ್ನು ಕ್ರಯ ಕೊಟ್ಟು ನಾನು ಕೊಂಡುಕೊಂಡಿದ್ದೇನೆ. ಅದನ್ನು ನಾನು ದುರಾಲೋಚನೆಗಳಿಂದ ಬಿಡಿಸಿ ಅಧೋಗತಿಯಿಂದ ಪಾರುಮಾಡಿ ಆ ಪರಮಾತ್ಮನಿಗೆ ಅರ್ಪಣೆ ಮಾಡುವೆನು,' ಎಂದನು.

ಆದರೂ ಅವನ ದುಷ್ಕರ್ಮ ಫಲರೂಪವಾದ ದುಃಖವೂಯ ಜೀವನದ ದುರ್ಬುದ್ಧಿಯು ಅವನನ್ನು ಪ್ರಬಲವಾಗಿ ವಶಪಡಿಸಿ ಕೊಂಡಿದ್ದಿತು. ಪಾದ್ರಿಯ ಮನೆಯನ್ನು ಬಿಟ್ಟು ಹೊರಟ ಮಾರ ನೆಯ ದಿನವೇ ಪೆಟಿಟ್ ಜರ್ವೆಲ್ ಎಂಬ ಮಗುವಿನ ಬಳಿಯಿದ್ದ ನಾಲ್ವತ್ತು ಸೌಗಳ (ಸುಮಾರು ಒಂದೂಕಾಲು ರೂಪಾಯಿ) ನಾಣ್ಯವೊಂದನ್ನು ಕದ್ದನು. ತನ್ನ ತಪ್ಪಿಗಾಗಿ ಕೂಡಲೇ ಅವನ ಮನಸ್ಸಿನಲ್ಲಿ ಪಶ್ಚಾತ್ತಾಪ ಹುಟ್ಟಿ, ಆ ಹಣವನ್ನು ಹಿಂದಕ್ಕೆ

ಕೊಟ್ಟುಬಿಡಬೇಕೆಂದು ಆ ಮುಗುರ್ನನ್ನು ಎಲ್ಲೆಲ್ಲಿಯೂ ಹುಡುಕಿದನು. ಅದು ಸಿಕ್ಕಲಿಲ್ಲ. ಕೊನೆಗೆ ತನಗೆ ಸಂಧಿಸಿದ ಒಬ್ಬ ಪಾದ್ರಿಯ ಕೈಗೆ, ಬಡವರಿಗಾಗಿ ಉಪಯೋಗಿಸಲು, ಆ ಹಣವನ್ನು ಕೊಟ್ಟುಬಿಟ್ಟನು.

---

ಪಾದ್ರಿಗೆ ತನ್ನಲ್ಲಿ ಉಂಟಾದ ನಂಬಿಕೆಯಿಂದ ಮನಸ್ಸು ಕರಗಿ ಜೇನ್ ವಾಲ್ಜೀನನು ಅಲ್ಲಿಂದ ಮುಂದೆ ಒಳ್ಳೆಯ ನಡತೆಯಿಂದಿರುವುದೇ ಉತ್ತಮವೆಂದು ಅನುಭವದಿಂದ ತಿಳಿದುಕೊಂಡು, ತನ್ನ ಜನ್ಮಾವಧಿಯೂ ಒಳ್ಳೆಯ ನಡತೆಯನ್ನೇ ತನ್ನ ಧ್ಯೇಯವಾಗಿಟ್ಟುಕೊಂಡನು. ಒಂದು ಸಣ್ಣ ಪಟ್ಟಣದಲ್ಲಿ ಉದ್ಯೋಗವನ್ನು ಸಂಪಾದಿಸಿಕೊಂಡು ಎಂಟು ವರ್ಷಗಳಲ್ಲಿ ಒಳ್ಳೆಯ ಐಶ್ವರ್ಯವಂತನಾಗಿ, ಕಡೆಗೆ ಒಂದು ಕೈಗಾರಿಕೆಯ ಕಾರ್ಖಾನೆಗೆ ಅಧಿಪತಿಯೂ, ಗ್ರಾಮದ ಮುಖ್ಯಾಧಿಕಾರಿಯೂ ಆದನು. ಸಹಾಯಾಪೇಕ್ಷಿಗಳಾದ ಪ್ರತಿಯೊಬ್ಬರಿಗೂ ಸಹಾಯಮಾಡುವ ಉದಾರಮನಸ್ಸು ಇವನಿಗೆ ಹುಟ್ಟಿತು. ಈವರೆಗೆ ಅವನಿಗೆ ಐವತ್ತು ವರ್ಷ ವಯಸ್ಸಾಗಿತ್ತು; ಹೆಸರನ್ನು ಮಾನ್‌ಸಿಯೂರ್ ಮೇಡಲಿನ್ ಎಂದು ಬದಲಾಯಿಸಿಕೊಂಡಿದ್ದನು. ಊರಿನವರೆಲ್ಲರೂ ಇವನನ್ನು ಧರ್ಮನಿಷ್ಠನೆಂದೂ ತಮ್ಮ ಅತ್ಯಾಪ್ತ ಸ್ನೇಹಿತನೆಂದೂ ತಿಳಿದಿದ್ದರು. ಒಬ್ಬಾತನಿಗೆ ಮಾತ್ರ ಇವನ ವಿಷಯದಲ್ಲಿ ಸಂದೇಹವೇ ಇತ್ತು.

ಮಾನ್‌ಸಿಯೂರ್ ಮೇಡಲಿನನು ಎಲ್ಲರನ್ನೂ ಬಹು ಶಾಂತತೆಯಿಂದಲೂ ಪ್ರೀತಿಯಿಂದಲೂ ಕಾಣುತ್ತಿದ್ದನು. ರಾಜವೀಧಿಯಲ್ಲಿ ಹೋಗುತ್ತಿರುವಾಗ, ಜನರನೇಕರು ಈತನನ್ನು ದೇವರು ಯಾವಾಗಲೂ ಸುಖವಾಗಿಟ್ಟಿರಲೆಂದು ಅನೇಕ ವೇಳೆ ಕೃತಜ್ಞತೆಯಿಂದ ಹರಸುತ್ತಿದ್ದರು. ಈತನು ಬೀದಿಯಲ್ಲಿ ಹೊರಟಾಗ ಅನೇಕಾವೃತ್ತಿ, ಚಪ್ಪಟೆಯ ಟೋಪಿಯನ್ನೂ ಬೂದುಬಣ್ಣದ ಅಂಗಿಯನ್ನೂ ಧರಿಸಿ, ಕೈಯಲ್ಲಿ ಬಲವಾದ ಬೆತ್ತವನ್ನು ಹಿಡಿದಿದ್ದ ಒಬ್ಬ ಎತ್ತರವಾದ ಮನುಷ್ಯನು ಹಠಾತ್ತಾಗಿ ಇವನಕಡೆಗೆ ತಿರುಗಿ, ಇವನು ಕಣ್ಮರೆಯಾಗುವವರೆಗೂ ಇವನನ್ನೇ ಗುರಿಯಿಟ್ಟು ನೋಡುತ್ತ, ತಲೆಯನ್ನು ಮೆಲ್ಲನೆ ಅಲ್ಲಾಡಿಸಿ, ತನ್ನ ಕೆಳ ತುಟಿಯನ್ನು ಮೂಗಿನವರೆಗೂ ಚಾಚಿ ವಿಚಿತ್ರವಾಗಿ ಅಣಕಿಸುತ್ತ,

ಏನೋ ಸಾಧಿಸುತ್ತಿರುವವನಂತೆ ಚೇಷ್ಟೆಗಳನ್ನು ಮಾಡಿಕೊಂಡು ಹೋಗುತ್ತ, 'ಈ ಮನುಷ್ಯನು ಯಾರು? ಇವನನ್ನು ನಾನು ಎಲ್ಲಿಯೋ ನಿಜವಾಗಿಯೂ ನೋಡಿಯೇ ಇದ್ದೇನೆ. ಎಲ್ಲರಂತೆ ನಾನಿವನಿಗೆ ಮೋಸಹೋಗತಕ್ಕವನಲ್ಲ,' ಎಂದು ಮನಸ್ಸಿನಲ್ಲೇ ಅಂದುಕೊಂಡನು. ಈ ಮನುಷ್ಯನ ಹೆಸರು ಜೇವರ್ಟ್. ಇವನು ಗ್ರಾಮರಕ್ಷಕರಲ್ಲಿ ಒಬ್ಬನು (Police).

ಜೇವರ್ಟನು ಮಾನ್‌ಸಿಯೂರ್ ಮೇಡಲಿನನ ವಿಷಯದಲ್ಲಿ ಪರಿಪೂರ್ಣವಾದ ಸಂಶಯವುಳ್ಳವನಾಗಿ ವಿಧವಿಧವಾಗಿ ಊಹೆ ಮಾಡುತ್ತ ಅವನಮೇಲೆ ಕಣ್ಣಿಟ್ಟೇ ಇದ್ದನು. ಕಡೆಗೆ ಈ ವಿಷಯವು ಮೇಡಲಿನನ ಗಮನಕ್ಕೂ ಚೆನ್ನಾಗಿ ಬಿತ್ತು. ಆದರೂ ಇದರಿಂದ ಏನಾದೀತೆಂದು ಆತನು ಉದಾಸೀನಭಾವದಿಂದಿದ್ದನು. ಜೇವರ್ಟನನ್ನು ಈ ವಿಷಯವಾಗಿ ಆತನು ಯಾವ ಪ್ರಶ್ನೆಯನ್ನೂ ಮಾಡಲಿಲ್ಲ. ತನ್ನ ಬಳಿಗೆ ಕರೆಯಲೂ ಇಲ್ಲ. ಅವನು ಬಂದಾಗ ತಿರಸ್ಕರಿಸಲೂ ಇಲ್ಲ. ಅವನು ತನ್ನನ್ನು ದುರುಗುಟ್ಟಿಕೊಂಡು ಅಪಮಾನಕರವಾಗಿಯೂ ತನಗೆ ಕೋಪ ಬರುವಂತೆಯೂ ನೋಡುತ್ತಿದ್ದುದನ್ನು ಶಾಂತವಾಗಿ ಸಹಿಸಿಕೊಂಡು, ಅದನ್ನು ತಾನು ಗಮನಿಸದವನಂತೆಯೇ ತೋರ್ಪಡಿಸಿಕೊಂಡನು. ಇತರರನ್ನು ಕಂಡಂತೆಯೇ ಜೇವರ್ಟನನ್ನೂ ಸಹ ಶಾಂತಿ, ಪ್ರೀತಿ, ದಯೆಯಿಂದ ಕಾಣುತ್ತಿದ್ದನು.

ಮಾನ್‌ಸಿಯೂರ್ ಮೇಡಲಿನನಲ್ಲಿ ಸ್ವಾಭಾವಿಕವಾಗಿ ಕಂಡ ಶಾಂತಭಾವ ಮತ್ತು ಉತ್ತಮವಾದ ನಡೆವಳಿಕೆಗಳಿಂದ ಜೇವರ್ಟನ ಉದ್ದೇಶವು ನಿರರ್ಥಕವಾದಂತೆಯೇ ಕಂಡಿತು ಹೀಗಾದರೂ ಒಂದು ದಿನ ಜೇವರ್ಟನ ವಿಚಿತ್ರ ವರ್ತನವು ಮೇಡಲಿನನ ಮನಸ್ಸಿಗೆ ಚೆನ್ನಾಗಿಯೇ ತಟ್ಟಿದಂತೆ ಕಂಡಿತು. ಆ ಸಂದರ್ಭವೇನೆಂದರೆ:

ಒಂದು ದಿನ ಪ್ರಾತಃಕಾಲ ಮೇಡಲಿನನು ಆ ಊರಿನ ಒಂದು ಓಣಿಯಲ್ಲಿ ಹೋಗುತ್ತಿದ್ದನು. ಆಗ, ಅವನಿಗೆ ಯಾರೋ ಕೂಗಿಕೊಂಡಂತೆ ಧ್ವನಿಯು ಕೇಳಿಸಿತು. ಮುಂದೆ ಸ್ವಲ್ಪ



‘ಈ ಮನುಷ್ಯನು ಯಾರು? ....’
ಎಂದು ಜೀವರ್ಟನು ಮನಸ್ಸಿನಲ್ಲೇ ಅಂದುಕೊಂಡನು

ದೂರದಲ್ಲಿ ಜನರ ಗುಂಪು ಕಣ್ಣಿಗೆ ಬಿತ್ತು. ಇವನೂ ಅಲ್ಲಿಗೆ ಹೋದನು. ಫಾದರ್ ಫಾಚೆಲ್‌ವೆಂಟ್ ಎಂಬ ಒಬ್ಬ ಮುದುಕನು ತನ್ನ ಗಾಡಿಯ ಕೆಳಗೆ ಸಿಕ್ಕಿಕೊಂಡಿದ್ದನು. ಅವನ ಕುದುರೆಯು ನೆಲಕ್ಕೆ ಬಿದ್ದುಬಿಟ್ಟಿದ್ದಿತು. ತೊಡೆಗಳು ಮುರಿದು ಕುದುರೆಯು ಏಳಲಾರದೆ ಇತ್ತು. ಮುದುಕನು ಚಕ್ರಗಳ ನಡುವೆ ಸಿಕ್ಕಿಕೊಂಡಿದ್ದನು. ದುರ್ದೈವದೆಸೆಯಿಂದ ಭಾರವೆಲ್ಲವೂ ಆ ಮುದುಕನ ಮೇಲೆಯೇ ಬಿದ್ದಿತ್ತು. ಬಾಡಿಗೆ ಬಹಳ ಹೆಚ್ಚಾಗಿ ಸಾಮಾನು ತುಂಬಿತ್ತು. ಫಾದರ್ ಫಾಚೆಲ್‌ವೆಂಟನು ಆರ್ತಸ್ವರದಿಂದ ನರಳುತ್ತಿದ್ದನು. ಆತನನ್ನು ಹೊರಗೆ ಎಳೆದುಕೊಳ್ಳಲು ಜನರು ಪ್ರಯತ್ನಿಸಿದರು. ಅದು ಸಾಧ್ಯವಾಗಲಿಲ್ಲ. ಸ್ವಲ್ಪ ಅಚಾತುರ್ಯದಿಂದ ಎಳೆದರೂ ಆ ಮುದುಕನು ಜಜ್ಜಿಹೋಗುತ್ತಿದ್ದನು. ಒಟ್ಟು ಗಾಡಿಯನ್ನೇ ಕೆಳಗಿನಿಂದ ಏಕಕಾಲದಲ್ಲಿ ಮೇಲಕ್ಕೆ ಎತ್ತಿದಲ್ಲದೆ ಅವನನ್ನು ಹೊರಗೆ ತೆಗೆಯುವುದಕ್ಕೆ ಸಾಧ್ಯವೇ ಇರಲಿಲ್ಲ. ಈ ಅಪಾಯ ಸಮಯಕ್ಕೆ ಅಲ್ಲಿಗೆ ಬಂದ ಜೇವರ್ಟನು ಭಾರವನ್ನೆತ್ತುವ ಜಾಕ್ (jack) ಯಂತ್ರವನ್ನು ತರಲು ಹೇಳಿಕಳುಹಿಸಿದ್ದನು.

ಮಾನ್‌ಸಿಯುರ್ ಮೇಡಲಿನನೂ ಅಲ್ಲಿಗೆ ಬಂದನು. ಸೇರಿದ್ದ ಗುಂಪೆಲ್ಲವೂ ಆತನನ್ನು ಗೌರವಿಸಿ ಹಿಂದಕ್ಕೆ ಸರಿಯಿತು.

'ಸಹಾಯಮಾಡಿರಪ್ಪಾ! ಈ ಮುದುಕನ ಪ್ರಾಣವನ್ನುಳಿಸುವ ಪುಣ್ಯವಂತರು ಯಾರೂ ಇಲ್ಲವೇನಪ್ಪಾ!' ಎಂದು ಫಾಚೆಲ್‌ವೆಂಟನು ಆರ್ತಸ್ವರದಿಂದ ಕೂಗಿಕೊಂಡನು.

ಮಾನ್‌ಸಿಯುರ್ ಮೇಡಲಿನನು ಬಳಿಯಲ್ಲಿ ನಿಂತಿದ್ದವರ ಕಡೆಗೆ ತಿರುಗಿನೋಡಿ 'ಭಾರವನ್ನೆತ್ತುವ ಜಾಕ್ ಯಂತ್ರವು ಯಾರಲ್ಲಾದರೂ ಇದೆಯೋ?' ಎಂದನು.

ಒಬ್ಬ ರೈತ — ಅದನ್ನು ತರಲು ಹೋಗಿದ್ದಾರೆ.

ಮೇಡಲಿನ್ — ಅದು ಎಷ್ಟು ಹೊತ್ತಿಗೆ ಬರಬಹುದು?

ರೈತ — ಪ್ಲಾಚೆಟ್ ಎಂಬ ಹತ್ತಿರವಾದ ಸ್ಥಳಕ್ಕೇ ಕಳುಹಿ

ಸಿದ್ಧೇವೆ. ಅಲ್ಲಿ ಒಬ್ಬ ಕರ್ಮಾರನಿದ್ದಾನೆ. ಕಡೆಯ ಪಕ್ಷ ಕಾಲು ಗಂಟೆಯಾದರೂ ಬೇಕು.

ಮೇಡಲಿನ್ — ಕಾಲು ಗಂಟೆಯೇ ?

ಹಿಂದಿನ ರಾತ್ರಿ ಮಳೆ ಬಿದ್ದಿತ್ತು. ನೆಲವೆಲ್ಲವೂ ನೆನೆದು ಚಕ್ರಗಳು ಪ್ರತಿಕ್ಷಣದಲ್ಲಿಯೂ ನೆಲದೊಳಕ್ಕೆ ಹೆಚ್ಚು ಹೆಚ್ಚಾಗಿ ಕುಸಿದು ಆ ಗಾಡಿಯು ಮುದುಕನ ಎದೆಯ ಮೇಲೆ ಪ್ರಬಲವಾಗಿ ಒತ್ತುತ್ತಿದ್ದಿತು. ಇನ್ನು ಐದು ನಿಮಿಷದೊಳಗಾಗಿ ಅವನ ಪಕ್ಕೆ ಲುಬುಗಳು ಮುರಿದು ಚೂರಾಗುವುದೇ ನಿಜವೆಂಬ ಸ್ಥಿತಿಯುಲ್ಲಿತ್ತು.

ಮೇಡಲಿನ್ — ಕಾಲು ಗಂಟೆಯವರೆಗೂ ಕಾಯಲು ಸಾಧ್ಯವಿಲ್ಲ.

ರೈತರು — ಕಾಯಲೇಬೇಕು. ಬೇರೆ ಮಾರ್ಗವಿಲ್ಲ.

ಮೇಡಲಿನ್—ಆವರೆಗೆ ಅನರ್ಥವೇ ಆಗುವುದು. ಗಾಡಿಯು ಕ್ಷಣಕ್ಷಣಕ್ಕೂ ಕುಸಿಯುತ್ತಿರುವುದು ಕಾಣುವುದಿಲ್ಲವೇ ?

ರೈತರು — ಬೇರೆ ಉಪಾಯವೇ ಇಲ್ಲವಲ್ಲಾ !

ಮೇಡಲಿನ್ — ಕೇಳಿ, ಗಾಡಿಯ ಕೆಳಗೆ ಒಬ್ಬನು ನುಸಿದು ಹೋಗಿ ಅದನ್ನು ಬೆನ್ನಿನಮೇಲೆ ಎತ್ತುವುದಕ್ಕೆ ತಕ್ಕಷ್ಟು ಸ್ಥಳವಿದೆ; ಹೀಗೆ ಮಾಡಿದರೆ ಅರ್ಧ ನಿಮಿಷದೊಳಗಾಗಿ ಆ ಬಡ ಮುದುಕನನ್ನು ಹೊರಗೆ ತರಲು ಸಾಧ್ಯವಾಗುವುದು. ಇಲ್ಲಿ ಅಷ್ಟು ಶಕ್ತಿಯೂ ಧೈರ್ಯವೂ ಉಳ್ಳವರು ಯಾರೂ ಇಲ್ಲವೆ? ಇದ್ದರೆ ಅಂಥವನಿಗೆ ಐದು ಲೂಯಿಡೋರ್ (ಸುಮಾರು ಐವತ್ತೈದು ರೂಪಾಯಿ) ಗಳ ಬಹುಮಾನ ದೊರೆಯುವುದು.

ಗುಂಪಿನಲ್ಲಿ ಯಾರೂ ಹೊರಗೆ ಬರಲಿಲ್ಲ.

ಮೇಡಲಿನ್ — ಹತ್ತು ಲೂಯಿಡೋರುಗಳು ಬಹುಮಾನ !

ನಿಂತಿದ್ದವರು ದೃಷ್ಟಿಯನ್ನು ತಗ್ಗಿಸಿದರು ; ಅವರಲ್ಲಿ ಒಬ್ಬನು, 'ಪಿಶಾಚದಂತಹ ಠೊಣೆಯನಾಗಿರಬೇಕು. ಹಾಗಿದ್ದರೆ ಗಾಡಿಯ ಕೆಳಗೆ ಸಿಕ್ಕಿ ಜಜ್ಜಿಸಿಕೊಂಡು ಪ್ರಾಣಕಳೆದುಕೊಳ್ಳಲು ಅಂಥವನು ಹೋಗಬೇಕು,' ಎಂದು ಗೊಣಗುಟ್ಟಿದನು.

ಮೇಡಲಿನ್—ಯಾರಾದರೂ ಬನ್ನಿ, ಇಪ್ಪತ್ತು ಲೂಯಿಗಳು.

ಹಿಂದಿನಂತೆಯೇ ಎಲ್ಲರೂ ನಿಶ್ಯಬ್ದವಾಗಿಯೇ ಇದ್ದರು.

'ಯಾರೂ ಸುಮ್ಮನೆ ಮನಸ್ಸಿಲ್ಲದೆ ನಿಂತಿಲ್ಲ,' ಎಂಬ ಶಬ್ದವು ಕೇಳಿಸಿತು.

ಮೇಡಲಿನನು ತಿರುಗಿನೋಡಲು ಜೇವರ್ಟನು ಕಣ್ಣಿಗೆ ಬಿದ್ದನು. ಈತನು ಬಂದಾಗ ಅವನಿದ್ದುದನ್ನೇ ಗಮನಿಸಿರಲಿಲ್ಲ.

ಜೇವರ್ಟನು, 'ಶಕ್ತಿಯೊಂದರಿಂದಲೇ ಅದು ಸಾಧ್ಯವಿಲ್ಲ. ಇಂತಹ ಗಾಡಿಯನ್ನು ಬೆನ್ನಿನಮೇಲೆ ಎತ್ತಬೇಕಾದರೆ ಅವನು ಅತಿ ಭಯಂಕರ ಸಾಹಸಿಯಾಗಿರಬೇಕು,' ಎಂದನು.

ಅನಂತರ ಮೇಡಲಿನನನ್ನು ಗುರಿಯಿಟ್ಟು ನೋಡುತ್ತ, ಪ್ರತಿಯೊಂದು ಶಬ್ದವನ್ನೂ ಒತ್ತಿಒತ್ತಿ, 'ಮಾನ್‌ಸಿಯುರ್ ಮೇಡಲಿನ್, ನೀವು ಅಪೇಕ್ಷಿಸುವ ಕೆಲಸವನ್ನು ಮಾಡಲು ಶಕ್ತನಾದ ಒಬ್ಬ ಪುರುಷನನ್ನು ಮಾತ್ರ ನಾನು ನೋಡಿರುವೆನು,' ಎಂದನು.

ಮೇಡಲಿನನಿಗೆ ಗಾಬರಿಯಾಯಿತು.

ಜೇವರ್ಟ್--ಅವನೊಬ್ಬ ಅಪರಾಧಿಯು.

ಮೇಡಲಿನ್--ಓಹೋ! ಹಾಗೆಯೇ?

ಜೇವರ್ಟ್—ಅಹುದು. ಟೂಲಾನ್ ನಗರದ ಗ್ಯಾಲಿಯಲ್ಲಿ.

ಇದನ್ನು ಕೇಳಿ ಮೇಡಲಿನನ ಮುಖವು ವಿವರ್ಣವಾಯಿತು. ಇಷ್ಟು ಹೊತ್ತಿಗೆ ಗಾಡಿಯು ಮೆಲ್ಲಮೆಲ್ಲನೆ ಇಳಿಯುತ್ತಲೇ ಇದ್ದಿತು. ಫಾದರ್ ಫಾಚೆಲ್‌ವೆಂಟನು 'ಅಯ್ಯೋ! ನಾನು ಸತ್ತೆ. ನನ್ನ ಪಕ್ಕೆಲುಬುಗಳು ಒಡೆಯುತ್ತಿವೆ. ಜಾಕ್ ಯಂತ್ರ! ಅಯ್ಯೋ!' ಎಂದು ಅರಚಿದನು.

ಮೇಡಲಿನನು ಸುತ್ತಲೂ ನೋಡಿ, 'ಹಾಗಾದರೆ ಇಲ್ಲಿ ಇಪ್ಪತ್ತು ಲೂಯಿಗಳ ಬಹುಮಾನವನ್ನು ಪಡೆದು ಈ ಬಡ ಮುದುಕನ ಪ್ರಾಣವನ್ನು ಉಳಿಸಬಲ್ಲವರು ಯಾರೂ ಇಲ್ಲವಷ್ಟೆ!' ಎಂದನು.

ನಿಂತಿದ್ದವರಲ್ಲಿ ಒಬ್ಬರೂ ಅಲುಗಲಿಲ್ಲ. ಜೇವರ್ಟನು ಮಾತ್ರ, 'ನಾನು ಜಾಕ್ ಯಂತ್ರದಂತೆ ಕೆಲಸಮಾಡಬಲ್ಲ ಒಬ್ಬನನ್ನು

ಮಾತ್ರ ಬಲ್ಲೆನು ; ಅವನು ನಾನು ಹೇಳಿದ ಅಪರಾಧಿಯು,' ಎಂದು ಮತ್ತೆ ಪ್ರಾರಂಭಿಸಿದನು.

'ಅಯ್ಯೋ! ಜಜ್ಜಿಹೋಗುತ್ತಿದ್ದೇನಲ್ಲಾ!' ಎಂದು ಮುದುಕನು ಕೂಗಿಕೊಂಡನು.

ಮೋಡಲಿನನು ತಲೆಯೆತ್ತಿ, ಹದ್ದಿನಂತೆ ಸೆಟ್ಟ ದೃಷ್ಟಿಯಿಂದ ತನ್ನನ್ನೇ ನೋಡುತ್ತಿದ್ದ ಜೇವರ್ಟನನ್ನೂ, ಅಲುಗದೆ ಸುತ್ತಲೂ ನಿಂತಿದ್ದ ರೈತರನ್ನೂ ನೋಡಿ ವ್ಯಸನದಿಂದ ಕಿರುನಗೆ ನಕ್ಕು, ಮರು ಮಾತನಾಡದೆ ಮೊಣಕಾಲೂರಿ, ಜನರು ಕೂಗಿಕೊಳ್ಳುವುದಕ್ಕೆ ಮೊದಲೇ ಗಾಡಿಯ ಕೆಳಕ್ಕೆ ತೂರಿಹೋದನು.

ಅಲ್ಲಿದ್ದವರೆಲ್ಲರೂ ಭಯ ಸಂದೇಹಗಳಿಂದ ಸ್ತಬ್ಧರಾದರು.

ಮೋಡಲಿನನು ಆ ಭಯಂಕರವಾದ ಭಾರದ ಬಂಡಿಯ ಕೆಳಗೆ ಬೋರಲಾಗಿ ಮಲಗಿ, ಅದನ್ನೆತ್ತಲು ತನ್ನ ಮೊಣಕಾಲನ್ನೂ ಮೊಣಕೈಯನ್ನೂ ಒಟ್ಟುಗೂಡಿಸುವುದಕ್ಕಾಗಿ ಎರಡು ಸಲ ಪ್ರಯತ್ನಿಸಿದರೂ ಸಾಧ್ಯವಾಗಲಿಲ್ಲ. ಜನರು, 'ತಂದೇ! ಮೋಡಲಿನ್! ಅಲ್ಲಿಂದ ಹೊರಗೆ ಬನ್ನಿ,' ಎಂದು ಕೂಗಿಕೊಂಡರು. ಮುದಿ ಫಾಚೆಲ್‌ವೆಂಟನು, 'ಮಾನ್‌ಸಿಯುರ್ ಮೋಡಲಿನ್! ನೀನು ಹೊರಟುಹೋಗು ; ನಾನು ಸಾಯಲೇಬೇಕು. ಇದು ಪ್ರತ್ಯಕ್ಷವಾಗಿದೆ. ನನ್ನ ಹಂಬಲನ್ನು ಬಿಡು ; ಇಲ್ಲವಾದರೆ ನೀನೂ ಜಜ್ಜಿಹೋಗುವೆ,' ಎಂದನು. ಮೋಡಲಿನನು ಇದಕ್ಕೆ ಉತ್ತರ ಹೇಳಲಿಲ್ಲ. ಸುತ್ತಮುತ್ತಲಿದ್ದವರು ಉಸಿರಾಡದಷ್ಟು ನಿಶ್ಶಬ್ದವಾಗಿದ್ದರು. ಬಂಡಿಯ ಚಕ್ರಗಳು ಮಾತ್ರ ಕುಸಿಯುತ್ತಲೇ ಇದ್ದುವು. ಇದರಿಂದ ಮೋಡಲಿನನೂ ಸಹ ಅಲ್ಲಿಂದ ಬಿಡಿಸಿಕೊಂಡು ಹೊರಗೆ ಬರುವುದು ಅಸಾಧ್ಯವಾಗಿ ಕಂಡಿತು.

ಇದ್ದಕ್ಕಿದ್ದಹಾಗೆಯೇ ಆ ಗುಂಪು ಆಶ್ಚರ್ಯದಿಂದ ಬೆಚ್ಚಿತು. ಬಂಡಿಯು ಮೆಲ್ಲನೆ ಎದ್ದಿತು ; ಚಕ್ರಗಳು, ನಿಂತಿದ್ದ ಗುಣಿಗಳಿಂದ ಅರ್ಧ ಹೊರಗೆ ಬಂದುವು. 'ಬೇಗನೆ ಬನ್ನಿ! ಸಹಾಯ ಮಾಡಿ,' ಎಂಬ ಉಸುರುಕಟ್ಟಿದ ಉಬ್ಬಸದ ಧ್ವನಿಯೊಂದು ಕೇಳಿಸಿತು.

ಈ ಧ್ವನಿಯು ಯಾರದು? ತನ್ನ ಕಟ್ಟ ಕಡೆಯ ಪ್ರಯತ್ನವನ್ನು ಮಾಡಿದ ಮೋಡಲಿನನದು.

ಜನರೆಲ್ಲರೂ ಸಹಾಯ ಮಾಡಲು ನುಗ್ಗಿದರು. ನಿರ್ಮಲ ಮನಸ್ಸಿನ ಒಬ್ಬನ ಪ್ರಯತ್ನವು ಎಲ್ಲರಿಗೂ ಉತ್ಸಾಹವನ್ನೂ ಶಕ್ತಿಯನ್ನೂ ಕೊಟ್ಟಿತು. ಇಪ್ಪತ್ತು ಕೈಗಳು ಒಟ್ಟುಗೂಡಿ ಬಂಡಿಯು ಎದ್ದಿತು. ಮುದಿ ಫಾಚೆಲ್‌ವೆಂಟನು ಸುರಕ್ಷಿತನಾಗಿ ಹೊರಗೆ ಬಂದನು.

ಮೋಡಲಿನನು ಮೇಲಕ್ಕೆ ಎದ್ದನು. ಮೈಯಿಂದ ಬೆವರು ಧಾರೆಯಾಗಿ ಸುರಿಯುತ್ತಿದ್ದಿತು. ಮುಖವು ಕಳಾಹೀನವಾಗಿತ್ತು. ಅವನ ವಸ್ತ್ರಗಳೆಲ್ಲವೂ ಹರಿದು ಕೆಸರಿನಿಂದ ತುಂಬಿದ್ದುವು. ಎಲ್ಲರೂ ಇದನ್ನು ನೋಡಿ ಕಣ್ಣೀರು ಸುರಿಸಿದರು. ಮುದುಕನು ಮೋಡಲಿನನ ಪಾದಗಳಿಗೆ ನಮಸ್ಕರಿಸಿ, 'ನೀನೇ ದಯಾಮಯನಾದ ದೇವರು,' ಎಂದನು. ಮೋಡಲಿನನಿಗೂ ಸಹ ತಾನು ದೈವಯೋಗ್ಯವಾದ ಕಾರ್ಯಕ್ಕಾಗಿ ಕಷ್ಟಪಟ್ಟೆನೆಂಬ ಸಂತೋಷದಿಂದ ಕೂಡಿದ ಅನಿರ್ವಚನೀಯವಾದ ಭಾವವು ಮುಖದಲ್ಲಿ ತೇಲುತ್ತಿತ್ತು. ಆತನು ತನ್ನನ್ನೇ ಇನ್ನೂ ಸ್ಥಿರದೃಷ್ಟಿಯಿಂದ ನೋಡುತ್ತಿದ್ದ ಜೇವರ್ಟನ ಮುಖವನ್ನು ಪರಮ ಶಾಂತಭಾವದಿಂದ ನೋಡಿದನು.

---

೩

ಇದಾದ ಸ್ವಲ್ಪ ದಿನಗಳಲ್ಲಿಯೇ ಗ್ರಾಮಾಧಿಕಾರಿಗೂ ಜೇವರ್ಟನಿಗೂ ಪ್ರಬಲವಾದ ಚರ್ಚೆಯು ನಡೆಯಿತು. ಫಾಂಟೈನ್ ಎಂಬ ಬಡ ಹೆಂಗಸು ತನ್ನನ್ನು ಬೀದಿಯಲ್ಲಿ ಅವಮಾನ ಪಡಿಸಿದ ಯಾವನೋ ಒಬ್ಬ ಪುರುಷನ ಮೇಲ್ಬಿರಿದು ಜಗಳವಾಡಿದಳೆಂಬ ತಪ್ಪಿತಕ್ಕಾಗಿ ಜೇವರ್ಟನು ಅವಳನ್ನು ದಸ್ತಗಿರಿ ಮಾಡಿದ್ದನು. ಇವನು ಆ ಊರಿನ ಸೊಗಸುಗಾರರಲ್ಲಿ ಒಬ್ಬನಾದ ತರುಣನು. ಇವನು ಬಹಳ ಧನಿಕನಾಗಿ ದೊಡ್ಡ ಪದವಿಯಲ್ಲಿದ್ದುದರಿಂದ ಜೇವರ್ಟನು ಇವನಲ್ಲಿ ಬಹು ದಾಕ್ಷಿಣ್ಯವನ್ನಿಟ್ಟು ಯಾವಾಗಲೂ ಅವನಿಗನುಕೂಲವಾಗಿಯೇ ಇದ್ದನು. ಫಾಂಟೈನಳನ್ನು ಬಂದೀಖಾನೆಗೆ ಎಳೆದೊಯ್ಯಲು ಅವನು ಮೂರು ಮಂದಿಗೆ ಆಜ್ಞೆಮಾಡಿದನು. ಪಾಪ! ಆ ಹೆಂಗಸು ತಾನು ನಿರಪರಾಧಿನಿಯೆಂದು ಎಷ್ಟೋ ಹೇಳಿಕೊಂಡಳು. ಆದರೂ ಅವನು 'ನೀನು ಆರು ತಿಂಗಳು ಸೆರೆಮನೆಯಲ್ಲಿರಬೇಕು,' ಎಂದುತ್ತರಕೊಟ್ಟನು.

ಆ ಹೆಂಗಸಿಗೆ ಕೋಸೆಟ್ ಎಂಬ ಮಗುವಿದ್ದಿತು. ಆ ಮಗುವಿನಲ್ಲಾದರೂ ಕನಿಕರವಿಟ್ಟು ತನ್ನಲ್ಲಿ ದಯೆತೋರಿಸಬೇಕೆಂದು ಅವಳು ಬಹಳವಾಗಿ ಬೇಡಿಕೊಂಡಳು ಈ ಮಗುವನ್ನು ಬೇರೊಂದೂರಿನಲ್ಲಿದ್ದ ಒಂದು ಸತ್ರದ ಯಜಮಾನನೂ ಅವನ ಪತ್ನಿಯೂ ಸಹ, ತಮಗೆ ಇವಳಿಂದ ಬರಬೇಕಾಗಿದ್ದ ಹಣಕ್ಕಾಗಿ, ತಮ್ಮ ವಶದಲ್ಲಿಯೇ ಇಟ್ಟುಕೊಂಡಿದ್ದರು. ತಾಯಿಯು ಸೆರೆಮನೆಯನ್ನು ಸೇರಿ ಆ ಮಗುವಿನ ಜೀವನಕ್ಕಾಗಿ ಹಣವನ್ನು ಕಳುಹಿಸದೆ ಹೋದರೆ ಆ ಸತ್ರದವನು ಮಗುವನ್ನು ದಿಕ್ಕುಪಾಲು ಮಾಡಿಬಿಡುವನು. ಹೀಗಿದ್ದರೂ, ಅವಳು ಎಷ್ಟು ಆರ್ತೆಯಾಗಿ ಮೊರೆಯಿಟ್ಟರೂ ಜೇವರ್ಟನು, ಅವಳ ಪ್ರಾರ್ಥನೆಗೆ ಸ್ವಲ್ಪವೂ ಕಿವಿಗೊಡದೆ ಹೋದನು.

'ಹೊರಡು; ನಾನೆಲ್ಲವನ್ನೂ ಕೇಳಿದುದಾಯಿತು. ನಿನ್ನ

ಗೋಳೆಲ್ಲವೂ ಮುಗಿಯಿತಷ್ಟೆ? ಇನ್ನು ಒಂದು ಕ್ಷಣವೂ ವಿಳಂಬ ಮಾಡದೆ ಹೊರಟುಹೋಗು. ನಿನಗೆ ಆರು ತಿಂಗಳು ಕಾರಾಗೃಹ ವಾಸವನ್ನು ವಿಧಿಸಿದೆ. ದೇವರೇ ಪ್ರತ್ಯಕ್ಷನಾಗಿ ಬಂದರೂ ಈ ವಿಧಿಯನ್ನು ತಪ್ಪಿಸಲಾರ; ಹೊರಡು,' ಎಂದು ಜೇವರ್ಟನು ಗಜರಿದನು.

ಇದಕ್ಕೆ ಕೆಲವು ನಿಮಿಷಗಳ ಮೊದಲೇ, ಮಾನ್‌ಸಿಯುರ್ ಮೇಡಲಿನನು ಇವರಿಗೆ ಕಾಣದಂತೆ ಅಲ್ಲಿ ಬಂದು, ಮೆಲ್ಲನೆ ಬಾಗಿಲನ್ನು ಮುಚ್ಚಿ, ಕದಕ್ಕೆ ಒರಗಿಕೊಂಡು ನಿಂತು, ಫಾಂಟೈನಳ ಅತ್ಯಂತ ದೈನ್ಯದ ಗೋಳೆಲ್ಲವನ್ನೂ ಕೇಳುತ್ತಿದ್ದನು. ಆ ಕ್ಷಣವೇ ಆತನು ಫಾಂಟೈನಳನ್ನು ಬಿಡುಗಡೆಮಾಡುವಂತೆ ಜೇವರ್ಟನನ್ನು ಬಲಾತ್ಕರಿಸಿ, ಅವನಿಗೆ ಅಲ್ಲಿಂದ ಹೊರಟುಹೋಗುವಂತೆ ಆಜ್ಞೆ ಮಾಡಿದನು.

ಜೇವರ್ಟನು ಹೊರಟುಹೋದಮೇಲೆ ಮಾನ್‌ಸಿಯುರ್ ಮೇಡಲಿನನು ಆ ಹೆಂಗಸಿನ ಕಡೆಗೆ ತಿರುಗಿ, 'ಎಲೌ, ನೀನು ನನಗೇತಕ್ಕೆ ಈ ವಿಚಾರವನ್ನು ತಿಳಿಸಲಿಲ್ಲ? ಚಿಂತೆಯಿಲ್ಲ. ಈಗ ನಾನು ನಿನ್ನ ಸಾಲವನ್ನು ತೀರಿಸಿ ನಿನ್ನ ಮಗುವನ್ನು ನಿನ್ನ ಬಳಿಗೆ ಕರೆಯಿಸಿ ಕೊಡುತ್ತೇನೆ; ಅಥವಾ ನೀನಾದರೂ ಅಲ್ಲಿಗೆ ಹೋಗುವಂತೆ ಏರ್ಪಡಿಸುತ್ತೇನೆ. ನೀನು ಈ ಪ್ಯಾರಿಸ್ ನಗರದಲ್ಲಿ ಬೇಕಾದರೂ ಇರು; ಇಲ್ಲವಾದರೆ ನಿನ್ನಿಷ್ಟಬಂದ ಕಡೆ ಇರು. ನಿನ್ನನ್ನೂ ನಿನ್ನ ಮಗುವನ್ನೂ ನನ್ನ ಪೋಷಣೆಯಲ್ಲಿಟ್ಟುಕೊಳ್ಳುತ್ತೇನೆ. ನಿನಗಿಷ್ಟವಿಲ್ಲದಿದ್ದರೆ ಇನ್ನು ಜೀವನಕ್ಕಾಗಿ ನೀನು ಕೆಲಸಮಾಡಬೇಕಾಗಿಲ್ಲ,' ಎಂದು ಹೇಳಿದನು.

ಆ ಬಡಹೆಂಗಸು ಬಹಳವಾಗಿ ಕೆಮ್ಮಿನಿಂದ ನರಳುತ್ತಿದ್ದಳು. ಅವಳಿಗೆ ಹೊಟ್ಟೆಗಿಲ್ಲದೆ ಈ ಸ್ಥಿತಿಯಾಗಿದ್ದಿತೆಂದು ಕಂಡಿತು. ಮಾನ್‌ಸಿಯುರ್ ಮೇಡಲಿನನು, ತನ್ನ ಮನೆಯಲ್ಲಿಯೇ ಇದ್ದ ವೈದ್ಯಶಾಲೆಗೆ ಅವಳನ್ನು ಕಳುಹಿಸಿ, ಅಲ್ಲಿದ್ದ ಕೆಲವು ಮಂದಿ ದಯಾಳುಗಳಾದ ದಾದಿಯರ ವಶಕ್ಕೆ ಒಪ್ಪಿಸಿದನು. ಅವಳಿಗಿದ್ದ ಆತುರವೆಲ್ಲವೂ ತನ್ನ

ಮಗುವಿಗಾಗಿ. ಗ್ರಾಮಾಧಿಕಾರಿಯು ಕೋಸೆಟ್ಟಳನ್ನು ಕರೆತರು ವಂತೆ ಹೇಳಿಕಳುಹಿಸಿದನು. ಆದರೆ ಆ ಸತ್ರಾಧಿಕಾರಿಯೂ, ಅವನ ಹೆಂಡತಿಯೂ ಈ ಸಂದರ್ಭದಲ್ಲಿ ತಾವು ಹೆಚ್ಚು ಹಣವನ್ನು ಸಂಗ್ರಹಿಸಬೇಕೆಂಬ ದುರುದ್ದೇಶದಿಂದ ಒಂದರ ಮೇಲೊಂದು ಏನೇನೋ ನೆಪದ ಕಾರಣಗಳನ್ನು ಕಲ್ಪಿಸಿ ಹೇಳುತ್ತ, ಮಗುವನ್ನು ಕಳುಹಿಸದೆ ನಿಲ್ಲಿಸಿಕೊಂಡಿದ್ದರು. ಕಟ್ಟಕಡೆಗೆ ಗ್ರಾಮಾಧಿಕಾರಿಯು ತಾನೇ ಹೋಗಿಬರಬೇಕೆಂದು ನಿಶ್ಚಯಿಸಿದನು.

ಆತನು ಹೀಗೆ ಹೊರಡುವುದಕ್ಕೆ ಮೊದಲು ಜೇವರ್ಟನು ಅಕ ಸ್ಮಾತ್ತಾಗಿ ಆತನ ಕಚೇರಿಗೆ ಬಂದು, ತನ್ನನ್ನು ಪೋಲೀಸ್‌ಕೆಲಸ ದಿಂದ ನಿವೃತ್ತಿ (dismiss) ಮಾಡಿಬಿಡಬೇಕೆಂಬ ವಿಚಿತ್ರ ಪ್ರಾರ್ಥನೆ ಯನ್ನು ಇವನಲ್ಲಿ ವಿಜ್ಞಾಪಿಸಿಕೊಂಡನು.

ಏತಕ್ಕೆಂದು ಮಾನ್‌ಸಿಯುರ್ ಮೇಡಲಿನನು ಕೇಳಿದಾಗ, ಜೇವರ್ಟನು, ತಾನು ಆ ಪ್ಯಾರಿಸ್ ನಗರದ ಪೋಲೀಸು ಇಲಾ ಖೆಯ ಮುಖ್ಯಾಧಿಕಾರಿಗೆ, (Prefecture of Police) 'ಗ್ರಾಮಾಧಿಕಾರಿಯು ಹಿಂದೆ ಅಪರಾಧಿಯಾಗಿ ಶಿಕ್ಷೆಯನ್ನನು ಭವಿಸಿದ್ದ ಜೀನ್ ವಾಲ್ಜೀನನು ಎಂದು ಹೇಳಿಬಿಟ್ಟಿರುವೆನು,' ಎಂದು ಉತ್ತರ ಕೊಟ್ಟನು.

ಆದರೆ, ಫಾದರ್ ಷ್ಯಾಂಪ್ ಮ್ಯಾಥ್ಯೂ ಎಂಬ ಬೇರೊಬ್ಬ ಮನುಷ್ಯನನ್ನು, ಜೀನ್ ವಾಲ್ಜೀನನೆಂದು ದಸ್ತಗಿರಿ ಮಾಡಿದ್ದರು. ಅವನ ವಿಚಾರಣೆಯು ಆ ಮಾರನೆಯ ದಿನ ಅರಾಸ್ ಪಟ್ಟಣದಲ್ಲಿ ನಡೆಯಬೇಕಾಗಿದ್ದಿತು. ಇದರಿಂದ ತಾನು ಮಾಡಿದ್ದು ತಪ್ಪೆಂದು ಜೇವರ್ಟನ ಮನಸ್ಸಿಗೆ ತೋರಿತು.

ಗ್ರಾಮಾಧಿಕಾರಿಯು ಮರುಮಾತನಾಡದೆ ಜೇವರ್ಟನನ್ನು ಕಳುಹಿಸಿ ಕೊಟ್ಟು, ಹೊರಗೆ ಬಂದು, ಮರುದಿನ ಬೆಳಗಿನಜಾವದ ನಾಲ್ಕೂವರೆ ಗಂಟೆಗೆ ಒಂದು ಉತ್ತಮವಾದ ಕುದುರೆಯ ಬಂಡಿ ಯನ್ನು ಸಿದ್ಧಪಡಿಸಿರಬೇಕೆಂದು ತನ್ನ ಜನರಿಗೆ ಆಜ್ಞೆಮಾಡಿದನು. ರಾತ್ರಿಯೆಲ್ಲವೂ ಇವನ ಆತ್ಮವು ಶಾಂತಿಯಿಲ್ಲದೆ ಅದಿರಿ ಅಲ್ಲಾಡಿ

ಹೋಯಿತು. ಸ್ವಪ್ನಪ್ರಾಯವಾದ ಅನೇಕ ಆಲೋಚನಾ ತರಂಗಗಳು ಇವನ ಮನಸ್ಸಿನಲ್ಲಿ ತುಂಬಿಕೊಂಡಿದ್ದುವು.

ಅವನಿಗೆ ಆಗತಾನೆ ಏನೋ ವಿಚಿತ್ರವಾಗಿ ನಿದ್ದೆಯ ಮಂಪರದಿಂದ ಎಚ್ಚರವಾದಂತೆ ಆಯಿತು. ತಾನು ಮಧ್ಯರಾತ್ರಿಯಲ್ಲಿ ಒಂದು ಕಡಿದಾದ ಬಂಡೆಯಮೇಲಿಂದ ಜಾರುತ್ತ, ಗಡಗಡನೆ ನಡುಗುತ್ತ, ಕೆಳಗೆ ಇದ್ದ ಒಂದು ಆಳವಾದ ಕಮರಿಯ ಅಂಚಿನಿಂದ ಬಹು ಪ್ರಯಾಸಪಟ್ಟು ಮೇಲಕ್ಕೆ ಬರಲು ಪ್ರಯತ್ನಿಸುತ್ತಿದ್ದಂತೆ ಅವನ ಮನಸ್ಸಿಗೆ ತೋರಿತು. ಈ ಅಂಧಕಾರದಲ್ಲಿ, ಅಪರಿಚಿತನೊಬ್ಬನು ಇವನ ಕಣ್ಣಿಗೆ ಸ್ಪಷ್ಟವಾಗಿ ಗೋಚರನಾದನು. ದೈವವು ಈ ಮನುಷ್ಯನನ್ನು ಜೀನ್ ವಾಲ್ಜೀನನೆಂಬ ತಪ್ಪು ಭಾವನೆಯಿಂದ ತನಗೆ ಪ್ರತಿಯಾಗಿ ಆ ಕಮರಿಯೊಳಕ್ಕೆ ತಳ್ಳುತ್ತಿದ್ದಂತೆ ಇವನಿಗೆ ಕಂಡಿತು. ಈ ಕಮರಿಯನ್ನು ಮುಚ್ಚಲು ಅದರೊಳಕ್ಕೆ ತಾನಾಗಲಿ ಮತ್ತೊಬ್ಬನಾಗಲಿ ಬೀಳಬೇಕಾದುದಾವಶ್ಯಕವಾಗಿದ್ದಂತೆ ಇತ್ತು. ಈಗಿನ ಸಂದರ್ಭದಲ್ಲಿ ಆದುದಾಗಲೆಂದು ತಾನು ಸುಮ್ಮನಿದ್ದಂತೆ ತೋರಿತು.

ಕಳೆದ ಎಂಟು ವರ್ಷಗಳೊಳಗೆ ಜೀನ್ ವಾಲ್ಜೀನನು ತನ್ನ ದುರಾಲೋಚನೆ ಮತ್ತು ದುಷ್ಕಾರ್ಯಗಳಿಗಾಗಿ ದುಷ್ಫಲಾನುಭವವನ್ನು ಪಡೆದುದು ಇದೇ ಮೊದಲು.

ಅವನು ಬಲು ಬೇಸರದಿಂದ ಆ ಚಿಂತೆಯನ್ನು ಒತ್ತಟ್ಟಿಗಿಟ್ಟು, ಇದರ ಅರ್ಥವೇನೆಂಬುದನ್ನು ತನ್ನಲ್ಲಿ ತಾನೇ ಆಲೋಚಿಸುತ್ತ, 'ನನ್ನ ಉದ್ದೇಶವು ನೆರವೇರಿತು,' ಎಂದುಕೊಂಡನು. ಅವನು ಇಷ್ಟು ದಿನಗಳು ಸತ್ಯವಂತನಾಗಿ ಜೀವಿಸಿದುದರಲ್ಲಿ ಅವನ ಮುಖ್ಯವಾದ ಉದ್ದೇಶವು ಯಾವುದು? ಹಿಂದಿನಂತೆ ಪಾಪಕೃತ್ಯಗಳನ್ನು ಮಾಡುವುದನ್ನು ಬಿಟ್ಟು ಯೋಗ್ಯನಾಗಿರುವುದಷ್ಟೆ! ಆದರೆ ಅವನು ಅದನ್ನು ಬಿಟ್ಟಂತಿರಲಿಲ್ಲ. ಪಾಪ! ಅವನು ತನಗೆ ಮಹಾ ದುಷ್ಕೀರ್ತಿಯನ್ನು ತರುವ ಮತ್ತೊಂದು ಮಹಾಪರಾಧವನ್ನು ಮಾಡಿ, ಮುಚ್ಚಿಹೋಗಿದ್ದ ಪಾಪಬುದ್ಧಿಯ ದ್ವಾರವನ್ನು ಮತ್ತೆ ತೆರೆದಂತಾಯಿತು. ಹೇಗೆಂದರೆ: ಈಗ ಅವನು ಮತ್ತೆ ಅತಿ ನೀಚ

ನಾದ ತಲೆಯೊಡಕನಂತೆ, ಮತ್ತೊಬ್ಬ ಮನುಷ್ಯನ ಜೀವಿತವನ್ನೇ ಹಾಳುಮಾಡಿ ಅವನ ಸಂತೋಷವನ್ನೂ ಪ್ರಾಣವನ್ನೂ ಕಳೆದು, ಅವನಿಗೆ ಈ ಲೋಕದಲ್ಲಿಯೇ ನಿಲ್ಲಲವಕಾಶವಿಲ್ಲದಂತೆ ಮಾಡುವ ದೊಡ್ಡ ಕೊಲೆಪಾತಕನೇ ಆಗಿದ್ದನು. ಎಂದರೆ, ಒಬ್ಬ ನಿರ್ಭಾಗ್ಯನಿಗೆ (ತನಗೆ ಪ್ರತಿಯಾಗಿ ಹಿಡಿಯಲ್ಪಟ್ಟಿದ್ದ ಫಾದರ್ ಷ್ಯಾಂಪ್ ಮ್ಯಾಥ್ಯೂಗೆ) ಗ್ಯಾಲಿಯಲ್ಲಿ ಶಿಕ್ಷೆಯನ್ನನುಭವಿಸುವ ಹಾಗೆ ಮಾಡಿ ಅವನನ್ನು ಸಜೀವನಾಗಿ ಸುಡಿಸುವನೋ ಎಂಬಂತಹ ಭಯಂಕರ ಮರಣರೂಪ ದಂಡನೆಗೆ ಗುರಿಮಾಡಿದ್ದನು.

ತನ್ನಿಂದ ಇಷ್ಟು ಅನರ್ಥವುಂಟಾಗಿರುವ ವಿಚಾರವೆಲ್ಲವೂ ಇವನ ಮನಸ್ಸಿಗೆ ಬಂದಾಗ, ಹಿಂದೆ ತನಗೆ ಸದುಪದೇಶಮಾಡಿದ ಪಾದ್ರಿಯು ತನ್ನೆದುರಿನಲ್ಲಿ ತನ್ನನ್ನೇ ನೆಟ್ಟದೃಷ್ಟಿಯಿಂದ ನೋಡುತ್ತ ನಿಂತಿದ್ದಂತೆ ಇವನಿಗೆ ಕಂಡಿತು. ಪರಮ ಗುಣಶಾಲಿಯೆನಿಸಿದ್ದ ಗ್ರಾಮಾಧಿಕಾರಿ ಮಾನ್‌ಸಿಯುರ್ ಮೇಡಲಿನನು ಆ ಪಾದ್ರಿಯ ಕಣ್ಣಿಗೆ ಮಹಾ ದ್ರೋಹಿಯಾಗಿಯೂ, ಗ್ಯಾಲಿಯಲ್ಲಿ ಗುಲಾಮನಾಗಿದ್ದ ಜೀನ್ ವಾಲ್ಜೀನನೇ ಶುದ್ಧನಾಗಿಯೂ ಕಂಡಂತೆ ಇವನಿಗೆ ತೋರಿತು. ಜನರು ತನ್ನ ವೇಷದಿಂದ ಭ್ರಾಂತರಾಗಿದ್ದರೆಂತಲೂ ಪಾದ್ರಿಯು ತನ್ನ ನಿಜತ್ವವನ್ನು ಬಲ್ಲನೆಂತಲೂ, ಜನರು ತನ್ನ ಸಜೀವ ವಿಗ್ರಹವನ್ನು ಮಾತ್ರ ನೋಡಿದ್ದರೆಂತಲೂ ಪಾದ್ರಿಯು ತನ್ನ ಮನಸ್ಸಾಕ್ಷಿಯಲ್ಲಿ ಹೊಕ್ಕು ನೋಡಿದ್ದನೆಂತಲೂ ಇವನ ಮನಸ್ಸಿಗೆ ನಿರ್ಧರವಾಯಿತು.

ಈಗ ಏನು ಮಾಡಬೇಕು! ತಾನು ಆರಾಸ್ ಪಟ್ಟಣಕ್ಕೆ ಹೋಗಿ ಅಪರಾಧಿಯಾದ ಜೀನ್ ವಾಲ್ಜೀನನನ್ನು ದಂಡನೆಗಾಗಿ ಒಪ್ಪಿಸಿ, ನಿರಾಪರಾಧಿಯಾದ ಷ್ಯಾಂಪ್ ಮ್ಯಾಥ್ಯೂನನ್ನು ಶಿಕ್ಷೆಯಿಂದ ಪಾರುಮಾಡಬೇಕು. ಇದಲ್ಲವೇ ಆತ್ಮಾರ್ಪಣ ಕಾರ್ಯಗಳಲ್ಲಿ ಅತ್ಯಂತ ಸ್ತೋತ್ರಾರ್ಹವಾದುದು! ಈ ಮನುಷ್ಯನ ಜೀವಮಾನದ ವಿಜಯ ಕಾರ್ಯಗಳಲ್ಲಿ ಅತ್ಯಂತ ಹೃದಯ ಭೇದಕವಾದುದು! ಅಹುದು; ಇದೇ ಇವನು ಮಾಡಬೇಕಾದ ಕಡೆಯ

ಕರ್ತವ್ಯ! ಇವನು ಆ ಕಾರ್ಯವನ್ನು ಮಾಡಲೇಬೇಕು. ಅಯ್ಯೋ! ದುಷ್ಟ ವಿಧಿಯೇ! ಅವನು ಭಗವಂತನ ದೃಷ್ಟಿಯಲ್ಲಿ ಪರಿಶುದ್ಧನೆನಿಸಿಕೊಳ್ಳಬೇಕಾದರೆ ಜನರ ಕಣ್ಣಮುಂದೆ ಅಪಕೀರ್ತಿಗೆ ಮತ್ತೆ ಬೀಳಬೇಕಾಯಿತು. ಆಗ ತಾನು ಮಾತನಾಡುತ್ತಿರುವೆನೆಂದು ತನಗೇ ಗೋಚರವಿಲ್ಲದೆ ಅವನು,

'ಆಗಲಿ! ಇದೇ ಮಾರ್ಗವನ್ನೇ ಅನುಸರಿಸಬೇಕು. ಕರ್ತವ್ಯವನ್ನು ಮಾಡುವುದೇ ಸರಿ. ಆ ಮನುಷ್ಯನನ್ನು ಉಳಿಸುವುದೇ ಸಿದ್ಧಾಂತ,' ಎಂದು ತನ್ನ ಮನಸ್ಸಿನಲ್ಲಿ ಉಂಟಾದ ಭಾವನೆಯನ್ನು ಗಟ್ಟಿಯಾಗಿ ಉಚ್ಚರಿಸಿದನು.

ಉತ್ತರ ಕ್ಷಣದಲ್ಲಿಯೇ ಇವನ ಮನಸ್ಸಿಗೆ ಇನ್ನೊಂದಾಲೋಚನೆಯು ಹೊಳೆಯಿತು. ತಾನು ತನ್ನ ಅಪರಾಧಿತ್ವವನ್ನು ಒಪ್ಪಿಕೊಂಡು ನಿಜಾಂಶವನ್ನು ವ್ಯಕ್ತಪಡಿಸಿದರೆ, ತನ್ನ ಧೀರತ್ವವನ್ನೂ, ಕಳೆದ ಎಂಟು ವರ್ಷಗಳಿಂದ ತಾನು ಸತ್ಯಶೀಲನಾಗಿದ್ದುದನ್ನೂ ತಾನು ದೇಶಕ್ಕೆ ಮಾಡಿರುವ ಉಪಕಾರವನ್ನೂ ಗೌರವಿಸಿ ಒಂದು ವೇಳೆ ತನ್ನನ್ನು ಕ್ಷಮಿಸಿದರೂ ಕ್ಷಮಿಸಬಹುದೆಂದು ಇವನಿಗೆ ತೋರಿತು.

ಆದರೆ ಈ ಭಾವವು ಬಹಳ ಹೊತ್ತು ಇವನ ಮನಸ್ಸಿನಲ್ಲಿ ನಿಲ್ಲಲು ಅವಕಾಶವಿರಲಿಲ್ಲ. ಕ್ಷಣಾರ್ಧದಲ್ಲಿ ಹಾರಿ ಹೋಯಿತು. ತಾನು ಪೆಟಿಟ್ ಜರ್ವೈಲ್ ಎಂಬ ಮಗುವಿನಿಂದ ನಲವತ್ತು ಸೌಗಳನ್ನು ಕದ್ದ ಅಪರಾಧಿ ಎಂದು ಜ್ಞಾಪಕವಾಯಿತು. ಈಗ ತನಗೆ ಕ್ಷಮೆ ದೊರೆತರೂ ಮುಂದೆ ಈ ಮರೆಮಾಚಿದ ಅಪರಾಧಕ್ಕಾಗಿ ನ್ಯಾಯರೀತಿಯಾಗಿ ತನಗೆ ಮರಣಾಂತವಾಗಿ ಕ್ರೂರದಂಡನೆಯು ವಿಧಿಸಲ್ಪಡುವುದೇ ನಿಜವೆಂತಲೂ ಆಲೋಚಿಸಿ, ಇವನು ನಿರಾಶೆಯಿಂದ ತನ್ನಲ್ಲಿ ತಾನು ಕಿರುನಗೆ ನಕ್ಕನು.

ಹಗಲೆಲ್ಲವೂ ಪ್ರಯಾಣಮಾಡಿ ಆ ರಾತ್ರಿ ಆರಾಸ್ ಪಟ್ಟಣವನ್ನು ಸೇರಿದನು. ನ್ಯಾಯಸ್ಥಾನದಲ್ಲಿ ಪ್ರೇಕ್ಷಕ ಜನರು ಕಿಕ್ಕಿರಿದು ನೆರೆದಿದ್ದರು. ಒಳಗೆ ಪ್ರವೇಶಕ್ಕೆ ಅವಕಾಶವು ಇವನಿಗೆ ಹೇಗೋ ದೊರಕಿತು.

ಈ ಗುಂಪಿನಲ್ಲಿ ಇವನನ್ನು ಗಮನಿಸುವವರು ಯಾರು! ಎಲ್ಲರ ದೃಷ್ಟಿಯೂ ಒಂದು ವ್ಯಕ್ತಿಯ ಮೇಲೆಯೇ ಏಕಾಗ್ರವಾಗಿತ್ತು. ನ್ಯಾಯಾಧೀಶನು ಕುಳಿತಿದ್ದ ಗೋಡೆಯ ಎಡಭಾಗದಲ್ಲಿ ಒಂದು ಸಣ್ಣ ಬಾಗಿಲಿನ ಮುಂದೆ, ಮರದ ಕಾಲುಮಣೆಯ ಮೇಲೆ ಕೆಲವು ಮೇಣದ ಬತ್ತಿಗಳನ್ನು ಹಚ್ಚಿಟ್ಟಿದ್ದರು. ಈ ಕಾಲುಮಣೆಯ ಮೇಲೆ ಇಬ್ಬರು ಸಿಪಾಯಿಗಳ ನಡುವೆ ಒಬ್ಬ ಮನುಷ್ಯನು ನಿಂತಿದ್ದನು.

ಇವನಿಗೆ ಕಡೆಯಪಕ್ಷ ಅರವತ್ತು ವರ್ಷಗಳ ವಯಸ್ಸಾಗಿದ್ದಂತೆ ಕಂಡಿತು. ಆದರೂ ಇವನು ಅತ್ಯಂತ ಒರಟನಾಗಿಯೂ, ಶುಂಠನಾಗಿಯೂ ಮತ್ತು ಭಯಂಕರಾಕಾರನಾಗಿಯೂ ಕಾಣುತ್ತಿದ್ದನು.

ಜೀನ್ ವಾಲ್ಜೀನನು ಇವನನ್ನು ನೋಡಿದ ಕೂಡಲೆ ತನ್ನನ್ನೇ ತಾನು ನೋಡಿದಂತಾಯಿತು. ಆದರೆ ಆ ವ್ಯಕ್ತಿಗೆ, ತನಗಿಂತಲೂ ಸ್ವಲ್ಪ ಹೆಚ್ಚು ವಯಸ್ಸಾಗಿದ್ದಂತೆಯೂ, ರೂಪಿನಲ್ಲಿ ಕೇವಲ ತನ್ನನ್ನೇ ಹೋಲುತ್ತಿದ್ದರೂ, ಅವನ ಬಿರುಗೂದಲಿನಿಂದಲೂ ಚಪಲವಾದ ಮತ್ತು ಭಯಂಕರವಾದ ಬಿರಿಗುಡ್ಡೆಗಳಿಂದಲೂ, ಅವನು ಹೊದೆದಿರುವ ಅಂಗವಸ್ತ್ರದಿಂದಲೂ ಅವನು ತನ್ನ ಹಾಗೆಯೇ ಇದ್ದಂತೆಯೂ ತೋರಿತು. ಅಲ್ಲದೆ ತಾನು ಗ್ಯಾಲಿಯಲ್ಲಿದ್ದ ಹತ್ತೊಂಭತ್ತು ವರ್ಷಗಳಲ್ಲಿ ತನಗುಂಟಾಗಿದ್ದಂತಹ ಭಯಂಕರಾಲೋಚನೆಗಳಿಂದ ಕೂಡಿ ಅವನೂ ಕ್ರೋಧಾವೇಶಭರಿತನಾಗಿದ್ದಂತೆಯೇ ಜೀನ್ ವಾಲ್ಜೀನನಿಗೆ ಕಂಡಿತು.

ಗಡಗಡನೆ ನಡುಗಿ ತನ್ನಲ್ಲಿ ತಾನು, 'ಅಯ್ಯೋ, ದೇವರೇ! ನಾನು ಮತ್ತೆ ಈ ಸ್ಥಿತಿಗೆ ಬರಬೇಕೇ?' ಎಂದುಕೊಂಡನು.

ಜೀನ್ ವಾಲ್ಜೀನನಿಗೆ ಚಿತ್ತವಿಭ್ರಾಂತಿಯಾಯಿತು. ಸುತ್ತಲೂ ನೋಡಿದನು. ಎದೆ ಝಲ್ಲೆಂದಿತು. ಕಣ್ಣನ್ನು ಮುಚ್ಚಿ ಅಂತರಾತ್ಮದಿಂದ, 'ಇಲ್ಲ, ಇಲ್ಲ. ಎಂದಿಗೂ ಇಲ್ಲ,' ಎಂದು ಕೂಗಿಕೊಂಡನು.

---

ಬ್ರೈವೆಟ್, ಚೆನಿಲ್‌ಡ್ಯೂ, ಕೋಷೆಪೆಯಿಲ್ ಎಂಬ ಮೂರು ಮಂದಿ ಸಾಕ್ಷಿಗಳ ವಿಚಾರಣೆಯಾಯಿತು. ಇವರೂ ಅಪರಾಧಿಗಳಾಗಿದ್ದವರೇ. ಈ ಮೂವರೂ, 'ಈಗ ಬಂದಿಯಾಗಿರುವವನೇ ಜೀನ್ ವಾಲ್ಜೀನನು,' ಎಂದು ಸಾಕ್ಷ್ಯ ಹೇಳಿದರು. ಇವರು ಒಬ್ಬೊಬ್ಬರು ಸಾಕ್ಷ್ಯ ಹೇಳುವಾಗಲೂ, ಸೇರಿದ್ದ ಗುಂಪಿನಲ್ಲಿ, ಈ ಸಾಕ್ಷ್ಯದಿಂದ ಅಪರಾಧಿಯ ಹಣೆಯ ಬರಹವು ಕಂಡಂತೆಯೇ ಆಗುವುದೆಂದು ಗುಜುಗುಂಪುಲು ಹುಟ್ಟುತ್ತಿತ್ತು. ಕಟ್ಟಕಡೆಗೆ ನ್ಯಾಯಾಧಿಪತಿಯು, 'ಅಧಿಕಾರಿಗಳೇ, ಆಜ್ಞೆಯನ್ನು ನಡೆಯಿಸಲು ಸಿದ್ಧರಾಗಿ. ನಾನು ಇನ್ನು ಈ ಮೊಕದ್ದಮೆಯ ವಿಷಯವೆಲ್ಲವನ್ನೂ ಸಂಗ್ರಹಿಸಿ ತೀರ್ಮಾನ ಹೇಳುವೆನು,' ಎಂದನು.

ಈ ಸಮಯಕ್ಕೆ ನ್ಯಾಯಾಧಿಪತಿಯು ಬಳಿಯಲ್ಲಿ ಯಾರೋ ಹರಿದು ಬಂದಂತಾಯಿತು. 'ಬ್ರೆವೆಟ್, ಚೆನಿಲ್‌ಡ್ಯೂ, ಕೋಷೆಪೆಯಿಲ್, ಈ ಕಡೆ ನೋಡಿ,' ಎಂದು ಕೂಗಿಕೊಂಡ ಧ್ವನಿಯು ಕೇಳಿಬಂತು.

ಈ ಸ್ವರವು ಅತ್ಯಂತ ದುಃಖಕರವಾಗಿಯೂ ಭಯಂಕರವಾಗಿಯೂ ಇದ್ದುದರಿಂದ, ಇದನ್ನು ಕೇಳಿದವರೆಲ್ಲರೂ ದಿಕ್ಕು ತೋರದೆ ಸ್ತಬ್ಧರಾಗಿ ವಿವರ್ಣಮುಖರಾದರು.

ಎಲ್ಲರ ದೃಷ್ಟಿಗಳೂ ಈ ಸ್ವರವು ಕೇಳಿಬಂದ ಕಡೆಗೇ ತಿರುಗಿದ್ದುವು. ನ್ಯಾಯಾಧಿಪತಿಯು ಹಿಂದೆ ಗೌರವಸ್ಥರಾದ ಪ್ರೇಕ್ಷಕರ ಮಧ್ಯದಲ್ಲಿ ಕುಳಿತ್ತಿದ್ದ ಒಬ್ಬಾತನು ಎದ್ದು, ನ್ಯಾಯಾಧಿಪತಿಯ ಧರ್ಮಾಸನಕ್ಕೂ ನ್ಯಾಯವಾದಿಗಳು ಕುಳಿತ್ತಿದ್ದ ಸ್ಥಳಕ್ಕೂ ನಡುವೆಯಿದ್ದ ಸಣ್ಣ ಬಾಗಿಲನ್ನು ನೂಕಿ ತೆರೆದುಕೊಂಡು ನ್ಯಾಯಸ್ಥಾನದ ಮಧ್ಯದಲ್ಲಿ ಬಂದು ನಿಂತನು. ನ್ಯಾಯಾಧೀಶನೂ ಸರಕಾರದ ಪಕ್ಷದ ವಕೀಲನೇ ಮೊದಲಾದ ಇಪ್ಪತ್ತು ಮಂದಿಯು ಇವನನ್ನು ಗುರ್ತಿಸಿ ಆ ಕ್ಷಣವೇ, 'ಮಾನ್‌ಸಿಯುರ್ ಮೇಡಲಿನ್ !' ಎಂದು ಆಶ್ಚರ್ಯದಿಂದ ಕೂಗಿದರು.

ಓಹೋ! ಅವನೇ ನಿಜ! ಅವನ ಮುಖದಮೇಲೆ ಚೆನ್ನಾಗಿ ಬೆಳಕು ಬಿದ್ದಿತ್ತು. ಅವನು ಟೋಪಿಯನ್ನು ಕೈಯಲ್ಲಿ ಹಿಡಿದಿದ್ದನು. ಅವನ ಉಡುಪಿನಲ್ಲಿ ಯಾವ ವ್ಯತ್ಯಾಸವೂ ಇರಲಿಲ್ಲ. ನಿಲುವಂಗಿಗೆ ಸರಿಯಾಗಿ ಗುಂಡಿಗಳನ್ನು ಹಾಕಿಕೊಂಡಿದ್ದನು. ಆದರೆ ಅವನ ಮುಖವು ಕಳಾಹೀನವಾಗಿತ್ತು; ಅವನಿಗೆ ಸ್ವಲ್ಪ ಸಪುಕವುಂಟಾ ದಂತೆ ಇತ್ತು. ಆರಾಸ್ ಪಟ್ಟಣಕ್ಕೆ ಬರುವಾಗಲೇ ಅರ್ಧ ನರೆತಿದ್ದ ಅವನ ಕೂದಲು ಇಷ್ಟು ಹೊತ್ತಿಗೆ ತೀರ ಬೆಳ್ಳಗಾಗಿತ್ತು. ಎಲ್ಲರ ಕಣ್ಣುಗಳೂ ಇವನ ಮೇಲೆಯೇ ನೆಟ್ಟಿದ್ದುವು. ಇವನು, ಸಾಕ್ಷಿ ಗಳಾದ ಕೋಪೆಪೆಯಿಲ್, ಬ್ರೆವೆಟ್ ಮತ್ತು ಚೆನಿಲ್‌ಡ್ಯೂ ಇವರಿದ್ದ ಕಡೆಗೆ ಮುಂದುವರಿದು ಬಂದು, 'ನಿಮಗೆ ನನ್ನ ಗುರುತು ಸಿಕ್ಕ ಲಿಲ್ಲವೇ?' ಎಂದನು. ಈ ಮೂರು ಮಂದಿಯೂ ಬೆರಗಾಗಿ ದಿಕ್ಕುತೋರದೆ ತಮಗೆ ಗುರುತು ಸಿಕ್ಕಲಿಲ್ಲವೆಂದು ತಲೆಯ ನ್ನಳ್ಳಾಡಿಸಿದರು.

ಸರಕಾರದ ಪಕ್ಷದ ವಕೀಲನು ಗ್ರಾಮಾಧಿಕಾರಿಗೆ ಹುಚ್ಚು ಹಿಡಿದಿರುವುದೆಂದನು. ಆದರೆ ಮಾನ್‌ಸಿಯುರ್ ಮೇಡಲಿನನು ನ್ಯಾಯಸ್ಥಾನದಲ್ಲಿ ನೆರೆದಿದ್ದ ಜನರ ಎದೆ ಝಲ್ಲೆನ್ನುವಂತಹ ಧ್ವನಿ ಯಿಂದ, 'ಸ್ವಾಮಿ ವಕೀಲರೇ, ನಿಮಗೆ ನಮಸ್ಕಾರ; ನನಗೇನೂ ಹುಚ್ಚು ಹಿಡಿದಿಲ್ಲ; ನೀವೇ ನೋಡುವಿರಿ; ನೀವು ಒಂದು ದೊಡ್ಡ ತಪ್ಪನ್ನು ಮಾಡುತ್ತಲಿರುವಿರಿ. ಆ ಮನುಷ್ಯನಿಗೆ ಶಿಕ್ಷೆ ವಿಧಿಸದೆ ಅವನನ್ನು ಬಿಟ್ಟುಬಿಡಿ. ನನ್ನ ಮುಖ್ಯ ಕರ್ತವ್ಯವನ್ನು ನಾನು ನಡೆಯಿಸಬೇಕಾಗಿದೆ. ಶಿಕ್ಷಾರ್ಹನಾಗಿರುವ ಅಪರಾಧಿಯು ನಾನು. ಇಲ್ಲಿ ನಿಜಾಂಶವನ್ನು ಸ್ಪಷ್ಟವಾಗಿ ನೋಡುತ್ತಿರುವವನು ನಾ ನೊಬ್ಬನೇ. ಇದು ನಿಜವು. ನಾನು ಈಗ ಇಲ್ಲಿ ಮಾಡುತ್ತಿರುವ ಕಾರ್ಯವನ್ನು ಮೇಲಿನಿಂದ ಭಗವಂತನು ನೋಡುತ್ತಿದ್ದಾನೆ. ನನಗೆ ಅಷ್ಟೇ ಸಾಕು. ನಾನಿಲ್ಲಿಯೇ ಇರುವೆನು. ನನ್ನನ್ನು ನೀವು ಹಿಡಿದುಕೊಳ್ಳಬಹುದು. ಹೇಗಾದರೂ ನನ್ನಿಂದ ಸಾಧ್ಯವಾದಷ್ಟು ಉತ್ತಮ ಕಾರ್ಯಗಳನ್ನು ನಾನು ಮಾಡಿದ್ದೇನೆ. ನಾನು ಬೇರೆ ಹೆಸರ

ನ್ನಿಟ್ಟುಕೊಂಡು ವೇಷಾಂತರದಿಂದಿದ್ದೇನೆ. ಐಶ್ವರ್ಯವಂತನಾಗಿದ್ದೇನೆ. ಗ್ರಾಮಾಧಿಕಾರಿತ್ವವನ್ನು ಪಡೆದಿದ್ದೇನೆ. ಪುನಃ ಸತ್ಯವಂತರ ಸಂಘದಲ್ಲಿ ಸೇರಿಕೊಳ್ಳಲು ಆಸೆಪಟ್ಟು ಪ್ರಯತ್ನಿಸಿದ್ದೇನೆ. ಇದು ಸಾಧ್ಯವಲ್ಲವೆಂದು ಕಾಣುವುದು. ಮುಖ್ಯವಾಗಿ, ನಾನು ಹೇಳಲಾಗದ ಅನೇಕ ವಿಷಯಗಳಿವೆ. ನನ್ನ ಜೀವಮಾನಚರಿತ್ರವನ್ನು ನಾನು ನಿಮ್ಮಲ್ಲಿ ವಿಸ್ತರಿಸಿ ಹೇಳುವುದಿಲ್ಲ. ಆದರೂ ಯಾವಾಗಲಾದರೂ ನಿಮಗೆ ತಿಳಿಯಲೇ ತಿಳಿಯುವುದು. ನಾನು ಮಾನ್‌ಸೀನರ್ ಎಂಬ ಪಾದ್ರಿಯ ಕೆಲವು ವಸ್ತುಗಳನ್ನು ಕದ್ದೆನು; ಇದು ನಿಜ. ಪೆಟಿಟ್ ಜರ್ವೈಸ್ ಎಂಬ ಮಗುವಿನ ಹಣವನ್ನು ಕದ್ದುದೂ ನಿಜ. ಜೀನ್ ವಾಲ್ಜೀನನು ಬಹಳ ದುರಾತ್ಮನೂ, ನೀಚನೂ ಎಂದು ಅವರು ನಿಮಗೆ ಹೇಳಿದುದು ನ್ಯಾಯವು. ಆದರೆ ಅವನೇ ಅಷ್ಟು ದೂಷಣೆಗೂ ಪಾತ್ರನಾಗಲಾರನು. ನ್ಯಾಯಮೂರ್ತಿಗಳೇ, ಲಾಲಿಸಬೇಕು; ನನ್ನಂತಹ ಕೀಳಾದ ಮನುಷ್ಯನು ದೈವಸಂಕಲ್ಪಕ್ಕೆ ಪ್ರತಿಯಾಡುವುದಕ್ಕೂ ಸಮಾಜಕ್ಕೆ ತಿಳಿವಳಿಕೆಯನ್ನು ಹೇಳುವುದಕ್ಕೂ ಶಕ್ತನಲ್ಲ. ಆದರೆ ನಾನು ಯಾವ ದುಷ್ಕೀರ್ತಿಯಿಂದ ತಪ್ಪಿ ಆತ್ಮೋದ್ಧಾರಹೊಂದಲು ಯತ್ನಿಸಿದೆನೋ, ಅಂತಹ ದುರ್ಯಶವು ಜನರಿಗೆ ಬಹಳ ಹಾನಿಕರವಾದುದೆಂಬುದನ್ನು ತಾವು ಚೆನ್ನಾಗಿ ಗಮನದಲ್ಲಿಡಬೇಕು. ಗ್ಯಾಲೀ ಹಡಗೇ ಗ್ಯಾಲಿಯ ಗುಲಾಮನನ್ನು ಮಾಡುವುದು. ಅಲ್ಲಿನ ಸ್ಥಿತಿಯಿಂದಲೇ ಅವನು ಕಠೋರನೂ, ನೀಚನೂ ಆಗುವನು. ತಮಗೆ ಸಮ್ಮತವಾದರೆ ನನ್ನ ಮಾತನ್ನು ದಯಾಮಯವಾದ ತಮ್ಮ ಚಿತ್ತಕ್ಕೆ ತರಬೇಕು. ಗ್ಯಾಲೀ ಹಡಗುಗಳಿಗೆ ನಾನು ಹೋಗುವುದಕ್ಕೆ ಮೊದಲು ನಾನೊಬ್ಬ ದಡ್ಡನಾದ ರೈತನು, ಮಂಕುಮಂಕಾಗಿದ್ದೆನು. ಗ್ಯಾಲಿ ಶಿಕ್ಷೆಯಿಂದ ನನ್ನ ಸ್ಥಿತಿಯೇ ವ್ಯತ್ಯಾಸವಾಯಿತು. ನಾನು ಮೊದಲು ಶಾಂತನಾಗಿದ್ದು ಅನಂತರ ಮಹಾ ದುಷ್ಟನಾದೆ; ಮೊದಲು ಮರದ ಕೊರಡಿನಂತಿದ್ದವನು ಅನಂತರ ಉರಿಯುವ ಕೊಳ್ಳಿಯಾದೆ. ಮಹಾ ಕ್ರೂರತನದಿಂದ ಹಾಳಾಗಿ ಹೋಗಿದ್ದ

ನಾನು, ಈಚೆಗೆ ಪರೋಪಕಾರ ಗುಣದಿಂದಲೂ ದಯಾಪರತ್ವ ದಿಂದಲೂ ಉದ್ಧಾರವಾದೆ. ಆದರೆ ಕ್ಷಮಿಸಬೇಕು. ನಾನು ಹೇಳು ವುದು ನಿಮಗೆ ಅರ್ಥವಾಗಲಾರದು. ಇನ್ನೇನೂ ಹೇಳಲಾರೆ. ನನ್ನನ್ನು ಕರೆದುಕೊಂಡುಹೋಗಿ,' ಎಂದು ಹೇಳಿ, ಮತ್ತೆ, 'ಅಯ್ಯೋ ದೇವರೇ, ಈ ನ್ಯಾಯವಾದಿಯು ತಲೆಯಲ್ಲಾಡಿಸು ತ್ತಿರುವನಲ್ಲಾ,' ಎಂದು ನ್ಯಾಯವಾದಿಯನ್ನು ನೋಡಿ, 'ಸ್ವಾಮಿ, ಮಾನ್‌ಸಿಯುರ್ ಮೇಡಲಿನನಿಗೆ ಹುಚ್ಚು ಹಿಡಿದಿರುವುದೆನ್ನುವಿರಿ, ನೀವು ನನ್ನ ಮಾತನ್ನು ನಂಬುವುದಿಲ್ಲ. ಏನು ಮಾಡಲಿ! ಅಂತೂ ಆ ಮನುಷ್ಯನನ್ನು ಮಾತ್ರ ದಂಡನೆಗೆ ಗುರಿಮಾಡ ಬೇಡಿ. ಅಯ್ಯೋ! ಈ ಜನರಿಗೆ ನನ್ನ ಪರಿಚಯವೇ ಇಲ್ಲವೆ! ಆ ಜೇವರ್ಟನು ಇಲ್ಲಿದ್ದಿದ್ದರೆ ಕೂಡಲೇ ನನ್ನನ್ನು ಗುರುತಿಸು ತ್ತಿದ್ದನು,' ಎಂದನು.

ಈ ಮಾತುಗಳನ್ನು ಹೇಳಿದ ಅವನ ಸ್ವರದಲ್ಲಿ ಕಂಡ ದಯಾ ನುಯವಾದ ಮತ್ತು ಹೃದಯಭೇದಕವಾದ ವ್ಯಸನವನ್ನು ಅಷ್ಟಿ ಷ್ಟೆಂದು ಹೇಳಲು ಸಾಧ್ಯವಿರಲಿಲ್ಲ.

ಅವನು ಆ ಮೂರು ಮಂದಿ ಅಪರಾಧಿಗಳಾಗಿದ್ದವರ ಕಡೆಗೆ ತಿರುಗಿ, 'ಒಳ್ಳೆಯದು. ಬ್ರಿವೆಟ್, ನನಗೇನೋ ನಿನ್ನ ಗುರುತಿದೆ. ನಿನಗೆ ಜ್ಞಾಪಕವಿದೆಯೋ......'

ಎಂದು ಒಂದು ಕ್ಷಣ ನಿದಾನಿಸಿ ಅನಂತರ, 'ಗ್ಯಾಲಿ ಹಡಗಿನಲ್ಲಿ ನಿನ್ನನ್ನು ತೂಗಹಾಕುತ್ತಿದ್ದ ಆ ಹೆಣಿಗೆಯ ಹಗ್ಗದ ಜ್ಞಾಪಕವು ನಿನಗಿದೆಯೋ?' ಎಂದನು.

ಬ್ರಿವೆಟನು, ಆಶ್ಚರ್ಯದಿಂದ ಬೆಚ್ಚಿ, ಅವನನ್ನು ಕಾಲಿನಿಂದ ತಲೆಯವರೆಗೂ ನೋಡಿದನು.

ತರುವಾಯ ಮತ್ತೊಬ್ಬನನ್ನು ನೋಡಿ, 'ಚೇನಿಲ್‌ಡ್ಯೂ ಎಂಬ ಗೌರವ ನಾಮವನ್ನು ನಿನಗೆ ನೀನೇ ಕೊಟ್ಟುಕೊಂಡಿರುವೆ ಯಲ್ಲವೇ! ಚೇನಿಲ್‌ಡ್ಯೂ! ಕೇಳು, ನಿನ್ನ ಎಡಭುಜದಮೇಲೆ ಇದ್ದ ಟಿ. ಎಫ್. ಪಿ. ಎಂಬ ಮೂರು ಅಕ್ಷರಗಳನ್ನು ಅಳಿಸುವುದಕ್ಕಾಗಿ

ಒಂದು ದಿನ, ಬೆಂಕಿಯಿಂದ ತುಂಬಿದ ಕಾದ ತಟ್ಟೆಯಮೇಲೆ ಆ ಭುಜವನ್ನು ಇಟ್ಟುದುದರಿಂದ ಆ ಭುಜವೆಲ್ಲವೂ ಬಹಳವಾಗಿ ಸುಟ್ಟುಹೋಗಿದೆ. ಆದರೂ ಅಕ್ಷರಗಳು ಇನ್ನೂ ನಿನ್ನ ಭುಜದ ಮೇಲೆ ಕಾಣುತ್ತಲೇ ಇವೆ. ಅಲ್ಲವೇ ?' ಎಂದನು.

ಚೆನಿಲ್‌ಡ್ಯೂ, 'ಅಹುದು, ನಿಜ,' ಎಂದನು.

ಕೋಷೆಪೆಯಿಲನ ಕಡೆಗೆ ತಿರುಗಿ, 'ಕೋಷೆಪೆಯಿಲ್, ನಿನ್ನ ಎಡತೋಳಿನಮೇಲೆ ಗಾಯಮಾಡಿ ಸುಡುತ್ತಿದ್ದ ಪುಡಿಯಿಂದ ನೀಲಿ ಬಣ್ಣದ ಅಕ್ಷರಗಳಲ್ಲಿ ತಾರೀಖನ್ನು ಗುರ್ತಿಸಿರುವರಲ್ಲವೆ? ಅದು, ಚಕ್ರವರ್ತಿಯು ಕಾನೆಸ್ ಪಟ್ಟಣಕ್ಕೆ ಬಂದು ಇಳಿದ ೧೮೧೫ ನೆಯ ಮಾರ್ಚಿ ೧ನೇ ತಾರೀಖು. ಎಲ್ಲಿ ನಿನ್ನ ಅಂಗಿಯ ತೋಳನ್ನು ತೆರೆ,' ಎಂದನು.

ಕೋಷೆಪೆಯಿಲನು ಅಂಗಿಯ ತೋಳನ್ನು ತೆರೆದು ತೋರಿಸಿದನು. ಸುತ್ತಲೂ ಇದ್ದವರ ದೃಷ್ಟಿಗಳೆಲ್ಲವೂ ಇವನ ತೋಳಿನ ಮೇಲೆ ಬಿದ್ದುವು. ಒಬ್ಬ ಸಿಪಾಯಿಯು ದೀಪವನ್ನು ತಂದನು. ಅದೇ ತಾರೀಖು ಅಲ್ಲಿ ಸ್ಫುಟವಾಗಿ ಕಂಡಿತು.

ಅನಂತರ ದುಃಖಭಾಗಿಯಾದ ಮೋಡಲಿನನು ತನ್ನ ಪ್ರಯತ್ನವು ಸಫಲವಾಯಿತೆಂಬ ಭಾವದಿಂದಲೂ, ನಿರಾಶನಾದುದರಿಂದಲೂ ಒಂದು ವಿಧವಾದ ಕಿರುನಗೆಯಿಂದ, ನ್ಯಾಯಾಧೀಶನನ್ನೂ ಅಲ್ಲಿ ನೆರೆದಿದ್ದ ಜನಜಾಲವನ್ನೂ ನೋಡಿದನು. ಪ್ರತ್ಯಕ್ಷವಾಗಿ ನೋಡಿದ್ದವರು, ಅದನ್ನು ಸ್ಮರಿಸಿಕೊಂಡರೆ ಈಗಲೂ ಅವರ ಎದೆಯು ಝಲ್ಲೆನ್ನುವುದು. ಅನಂತರ ಆತನು, 'ಈಗಲಾದರೂ ನಾನು ಜೀನ್ ವಾಲ್ಜೀನನೆಂಬುದು ನಿಮಗೆ ಸ್ಪಷ್ಟವಾಯಿತಲ್ಲವೇ ?' ಎಂದನು.

ಆಗ ಆ ನ್ಯಾಯಸ್ಥಾನದಲ್ಲಿ ನ್ಯಾಯಾಧಿಪತಿಗಳೂ ಇಲ್ಲ, ವಾದಿಗಳೂ ಇಲ್ಲ, ವಕೀಲರೂ ಇಲ್ಲ, ಸಿಪಾಯಿಗಳೂ ಇಲ್ಲ; ನೆಟ್ಟ ಕಣ್ಣುಗಳೂ ಡವಗುಟ್ಟುವ ಎದೆಗಳೂ ಮಾತ್ರವೇ ಇದ್ದುವು. ಅಲ್ಲಿದ್ದವರಲ್ಲಿ ಯಾರಿಗೂ ತಮ್ಮ ಮನಸ್ಸಿನ ಸ್ಥಿತಿಯು ಹೇಗಿತ್ತೆಂದು

ಗೋಚರವೇ ಆಗಲಿಲ್ಲವೆಂದು ಹೇಳಬಹುದು. ಅಲ್ಲಿ ಅದ್ಭುತ ಪ್ರಕಾಶವೊಂದೂ ತಮ್ಮ ಕಣ್ಣಿಗೆ ಪ್ರತ್ಯಕ್ಷವಾಗಿ ಕಾಣದಿದ್ದರೂ, ಪ್ರತಿಯೊಬ್ಬರ ಹೃದಯದಲ್ಲಿಯೂ ಮಾತ್ರ ಯಾವುದೋ ಒಂದು ಪ್ರಬಲ ತೇಜಸ್ಸು ಮೂಡಿದಂತೆ ಆಗಿ, ಎಲ್ಲರೂ ವಿಭ್ರಾಂತ ರಾದರು.

ಯಾರು ಏನನ್ನೂ ಹೇಳದಿದ್ದರೂ ಅಲ್ಲಿದ್ದ ಜನರೆಲ್ಲರಿಗೂ, ಯಾವುದೋ ಒಂದು ವಿದ್ಯುತ್ಪ್ರಕಾಶದಿಂದ ಪ್ರತ್ಯಕ್ಷವಾಗಿ ಕಂಡಂತೆ, ಒಂದು ಕ್ಷಣದಲ್ಲಿ, ಈ ಮನುಷ್ಯನ ಮಹಾ ಚರಿತ್ರೆಯು ಮನಸ್ಸಿಗೆ ಗ್ರಾಹ್ಯವಾದುದಲ್ಲದೆ, ಈತನು, ತನಗೆ ಪ್ರತಿಯಾಗಿ ಮತ್ತೊಬ್ಬ ಮನುಷ್ಯನಿಗೆ ಶಿಕ್ಷೆಯಾಗಬಾರದೆಂಬ ಉದ್ದೇಶದಿಂದ ತನ್ನ ಆತ್ಮವನ್ನು ಅರ್ಪಿಸಿರುವನೆಂಬುದು ಸ್ಫುಟವಾಗಿ ಕಂಡು ಬಂದಿತು.

'ಇನ್ನು ಮುಂದಿನ ಕಾರ್ಯಗಳಿಗೆ ನಾನು ವಿಘ್ನಮಾಡ ಲಾರೆನು, ಇನ್ನೂ ನನ್ನನ್ನು ದಸ್ತಗಿರಿ ಮಾಡಿಲ್ಲವಾದಕಾರಣ ನಾನು ಹೊರಡುವೆನು. ನಾನು ಮಾಡಬೇಕಾದ ಕಾರ್ಯಗಳನೇಕವಿವೆ. ನಾನು ಎಲ್ಲಿಗೆ ಹೋಗುತ್ತಿರುವೆನೆಂಬುದು ಈ ವಾದಿಯ ಪಕ್ಷದ ವಕೀಲರಿಗೆ ಗೊತ್ತಿದೆ. ಅವರಿಗೆ ಇಷ್ಟ ಬಂದಾಗ ನನ್ನನ್ನು ದಸ್ತ ಗಿರಿಮಾಡಿಸಿ ತರಿಸಬಹುದು,' ಎಂದು ಹೇಳುತ್ತ ಜೀನ್ ವಾಲ್ಜೀ ನನು ಹೊರಬಾಗಿಲ ಕಡೆಗೆ ನಡೆದನು. ಅವನ ಮಾತಿಗೆ ಪ್ರತಿಯಾಡಿ ದವರೂ ಇಲ್ಲ. ಯಾರೂ ಅವನನ್ನು ತಡೆಯಲೂ ಇಲ್ಲ. ಎಲ್ಲರೂ ಒಂದು ಪಕ್ಕಕ್ಕೆ ಸರಿದು ನಿಂತರು. ಆ ಸಮಯದಲ್ಲಿ, ಆ ಜನರ ಗುಂಪು ಹಿಂದಕ್ಕೆ ಸರಿದು ಅವನಿಗೆ ದಾರಿಯನ್ನು ಬಿಡುವಂತೆ ಮಾಡುವಂತಹ ಒಂದು ಅನಿವಾರ್ಯವಾದ ದೈವಿಕ ಶಕ್ತಿಯು ಅವ ನಲ್ಲಿದ್ದಂತೆ ಕಂಡಿತು. ಗುಂಪಿನಲ್ಲಿ ಅವನು ನಿದಾನವಾಗಿ ಹೆಜ್ಜೆ ಹಾಕುತ್ತ ಬಂದನು. ಬಾಗಿಲನ್ನು ಯಾರು ತೆರೆದರೋ ಗೊತ್ತಿಲ್ಲ. ಆತನು ಬರುವ ಹೊತ್ತಿಗೆ ಮಾತ್ರ ಬಾಗಿಲು ತೆರೆದಿತ್ತು. ಅವರ ಬಳಿಗೆ ಬಂದು ಹಿಂದಿರುಗಿ, ಅವನು, 'ಸ್ವಾಮಿ, ವಕೀಲ ಮಾನ್ನಿ

ಯುರವರೇ! ನಾನು ನಿಮ್ಮ ವಶವರ್ತಿಯಾಗಿದ್ದೇನೆ,' ಎಂದು ಹೇಳಿದನು.

ಅನಂತರ, ನೆರೆದಿದ್ದ ಜನರ ಗುಂಪನ್ನು ಸಂಬೋಧಿಸಿ, 'ಇಲ್ಲಿ ನೆರೆದಿರುವ ನೀವೆಲ್ಲರೂ ನನ್ನ ವಿಷಯದಲ್ಲಿ ಕನಿಕರಪಡುವಿರಲ್ಲವೇ? ಪರಮಾತ್ಮಾ! ನಾನು ಏನು ಮಾಡಲುದ್ದೇಶಿಸಿರುವೆನೆಂಬುದನ್ನಾಲೋಚಿಸಿಕೊಂಡರೆ ನನ್ನ ವಿಷಯದಲ್ಲಿ ನೀವು, ಇಂತಹ ಸುಸಂಧಿಯು ಇವನಿಗೆ ದೊರೆಯಿತಲ್ಲಾ ಎಂದು ಅಸೂಯೆ ಪಡಬೇಕಾಗಿದೆ. ಆದರೂ ಇಂತಹ ಸ್ಥಿತಿಯೊದಗಬಾರದಾಗಿತ್ತೆಂದಾಲೋಚಿಸುವಿರಿ,'

ಎಂದು ಹೇಳಿ ಹೊರಗೆ ಹೊರಟನು. ಬಾಗಿಲು ಹೇಗೆ ತೆರೆಯಿತೋ ಹಾಗೆಯೇ ಮುಚ್ಚಿಕೊಂಡಿತು. ಅಮೋಘ ಕಾರ್ಯಗಳನ್ನು ಮಾಡತಕ್ಕ ಮಹನೀಯರಿಗೆ ಸೇವೆ ಮಾಡಲು ಗುಂಪಿನಲ್ಲಿ ಯಾರಾದರೂ ಸಿದ್ಧರಾಗಿಯೇ ಇರುವರಷ್ಟೆ.

ಅನಂತರ ಒಂದು ಗಂಟೆಯ ಕಾಲದಲ್ಲಿ ನ್ಯಾಯಸ್ಥಾನದ ಪಂಚಾಯಿತರ ನಿರ್ಣಯದಂತೆ, ಷ್ಯಾಂಪ್ ಮ್ಯಾಥ್ಯೂ ಎಂಬಾತನು ನಿಸ್ಸಂದೇಹವಾಗಿಯೂ ನಿರಪರಾಧಿಯೆಂದು, ಬಿಡುಗಡೆ ಮಾಡಲ್ಪಟ್ಟನು. ಹೀಗೆ ಶಿಕ್ಷೆಯಿಂದ ತಪ್ಪಿ ಬಂದ ಷ್ಯಾಂಪ್‌ಮ್ಯಾಥ್ಯೂನನು ಮಂಕು ಬಡಿದವನಾಗಿ, ಅಲ್ಲಿ ನಡೆದ ಕಥೆಯು ಸ್ವಲ್ಪವೂ ತನಗರ್ಥವಾಗದ ಕಾರಣ, 'ಇಲ್ಲಿ ಸೇರಿರುವರು ಎಲ್ಲರೂ ಹುಚ್ಚರು! ಹುಚ್ಚರು!' ಎಂದು ಹೇಳುತ್ತ ಹೊರಟುಹೋದನು.

---

*

ಜೀನ್ ವಾಲ್ಜೀನನು ತನ್ನ ಊರಿಗೆ ಬಂದಕೂಡಲೇ ನೆಟ್ಟನೆ ಫಾಂಟೈನಳು ಮರಣಾವಸ್ಥೆಯಲ್ಲಿ ಮಲಗಿದ್ದ ಕೊಠಡಿಗೆ ಹೋದನು. ಜೇವರ್ಟನೂ ಹಿಂಬಾಲಿಸಿ ಬಂದಿದ್ದನು; ಅವನನ್ನು ದಸ್ತಗಿರಿ ಮಾಡಿದನು. ಜೀನ್ ವಾಲ್ಜೀನನು, ತಾನು ಕೋಸೆಟ್ಟಳನ್ನು ಕರೆತರುವುದಕ್ಕಾಗಿ ಹೋಗಿಬರುವುದಕ್ಕೂ ಮತ್ತು ತನ್ನ ಇತರ ಆಡಳಿತಗಳನ್ನು ಕ್ರಮಪಡಿಸಿಕೊಳ್ಳುವುದಕ್ಕೂ ಸಹ ಮೂರು ದಿನಗಳ ಅವಧಿಯನ್ನು ಕೊಡಬೇಕೆಂದು ಜೇವರ್ಟನನ್ನು ಬಹಳವಾಗಿ ಬೇಡಿಕೊಂಡನು. ಆದರೆ ಜೇವರ್ಟನು ಮಹಾ ಕಠಿಣನಾಗಿ, ಆಗುವುದೇ ಇಲ್ಲವೆಂದು ತಿರಸ್ಕರಿಸಿದನು. ಇವರಿಬ್ಬರಿಗೂ ನಡೆಯುತ್ತಿದ್ದ ಈ ಚರ್ಚೆಯಿಂದ ಎದೆಯೊಡೆದು ಫಾಂಟೈನಳು ಇವರೆದುರಲ್ಲಿಯೇ ಪ್ರಾಣವನ್ನು ಬಿಟ್ಟಳು. ಜೇವರ್ಟನು ಜೀನ್ ವಾಲ್ಜೀನನನ್ನು ನೆಟ್ಟಗೆ ಸೆರೆಮನೆಗೆ ಕರೆದುಕೊಂಡು ಹೋದನು.

ಜೀನ್ ವಾಲ್ಜೀನನಿಗೆ ತಾನು ಆವಶ್ಯಕವಾಗಿ ಗಮನಿಸಬೇಕಾಗಿದ್ದ ಕೆಲವು ವಿಷಯಗಳಿದ್ದುವು. ಹೇಗೋ ಸೆರೆಮನೆಯಿಂದ ತಪ್ಪಿಸಿಕೊಂಡು ಬಂದನು. ಅದೇ ದಿನ ಸಾಯಂಕಾಲ, ಅವನ ಮನೆಯ ಬಾಗಿಲು ಕಾಯುವ ಮುದುಕಿಯು, ಅವನು ಬಾಗಿಲಿಗೆ ಬಂದುದನ್ನು ಕಂಡು ಪರಮಾಶ್ಚರ್ಯಪಟ್ಟಳು.

ಅವಳು ಆಶ್ಚರ್ಯಪಟ್ಟುದನ್ನು ನೋಡಿ, ಆಗ ಅವನು, 'ನಾನು ಸೆರೆಮನೆಯ ಕಿಟಿಕಿಯ ಕಂಬಿಯೊಂದನ್ನು ಮುರಿದು, ಅದರೊಳಗಿಂದ ಮಾಳಿಗೆಯ ಮೇಲಕ್ಕೆ ಬಂದು, ಅಲ್ಲಿಂದ ಕೆಳಕ್ಕೆ ಧುಮ್ಮಿಕ್ಕಿ, ತಪ್ಪಿಸಿಕೊಂಡು ಓಡಿಬಂದೆನು,' ಎಂದು ತನ್ನ ವಿಷಯವನ್ನು ವಿವರಿಸಿ ಹೇಳಿ, 'ಈಗ ನಾನು ನನ್ನ ಕೊಠಡಿಗೆ ಹೋಗುವೆನು. ಸಿಸ್ಟರ್ ಸಿಂಪ್ಲಿಸಳನ್ನು ನಾನು ನೋಡಬೇಕಾಗಿದೆ. ಆಕೆಯನ್ನು ಕರೆದುಕೊಂಡು ಬಾ ಹೋಗು,' ಎಂದು ಹೇಳಿಕಳುಹಿಸಿದನು.

ಮುದುಕಿಯು ಅದರಂತೆ ಬೇಗನೆ ಹೋದಳು.

ಅವನು ತನ್ನ ಕೊಠಡಿಗೆ ಹೋಗಿ, ಉಡುಪುಗಳನ್ನಿಟ್ಟಿದ್ದ ಕಪಾಟದಿಂದ ಒಂದು ಅಂಗಿಯನ್ನು ತೆಗೆದು, ಅದನ್ನು ತುಂಡು ತುಂಡಾಗಿ ಹರಿದು, ಅದರಲ್ಲಿ ಬೆಳ್ಳಿಯ ಮೇಣದ ಬತ್ತಿಯನ್ನಿಡುವ ಕೊಳವೆಯನ್ನು ಸುತ್ತಿಕಟ್ಟಿದನು. ಇಷ್ಟಾದರೂ ಇವನಲ್ಲಿ ಆತುರವಾಗಲಿ ಕಾತರವಾಗಲಿ ಇರಲಿಲ್ಲ.

ಎರಡಾವೃತ್ತಿ ಮೆಲ್ಲನೆ ಬಾಗಿಲನ್ನು ತಟ್ಟಿದ ಶಬ್ದವು ಕೇಳಿ ಒಂತು. ಅವನು, 'ಒಳಗೆ ಬನ್ನಿ,' ಎಂದನು.

ಸಿಸ್ಟರ್ ಸಿಂಪ್ಲಿಸಳು ಒಳಗೆ ಬಂದಳು.

ಮಾತನಾಡುವುದಕ್ಕೆ ಪ್ರಯತ್ನಿಸಿದರೂ, ಒಂದೆರಡು ಅರ್ಥ ವಿಲ್ಲದ ಮಾತುಗಳನ್ನು ಆಕೆ, ತಪ್ಪಿಬ್ಬಾಗಿ, ಆಡುವುದೇ ಕಷ್ಟವಾ ಯಿತು. ಕಡೆಗೆ ಬಹು ಪ್ರಯತ್ನದಿಂದ, 'ಗ್ರಾಮಾಧಿಕಾರಿ ಮಾನ್ ಸಿಯುರವರು ಇನ್ನೊಂದಾವೃತ್ತಿ ಈ ನಿರ್ಭಾಗ್ಯಳ ಮನೆಗೆ ಬಂದು ತಮ್ಮ ಕಡೆಯ ದರ್ಶನವನ್ನು ಕೊಡಲಾಗುವುದಿಲ್ಲವೇ?' ಎಂದಳು.

ಅದಕ್ಕೆ ಅವನು, 'ಇಲ್ಲ, ನನ್ನನ್ನು ಬೆನ್ನಟ್ಟಿ ಬಂದಿದ್ದಾರೆ. ನಾನು ನಿಮ್ಮ ಕೊಠಡಿಗೆ ಬಂದರೆ ಅಲ್ಲಿಯೇ ನನ್ನನ್ನು ಹಿಡಿದುಬಿಡು ವರು. ಇದರಿಂದ ನಿಮಗೆ ಬಹಳ ತೊಂದರೆಯಾಗುವುದು,' ಎಂದನು.

ಇದನ್ನು ಹೇಳುವಷ್ಟರೊಳಗಾಗಿ ಮಹಡಿಯ ಮೇಲೆ ಗಟ್ಟಿ ಯಾದ ಶಬ್ದವು ಕೇಳಿಸಿತು. ಮೆಟ್ಟಿಲನ್ನು ಹತ್ತುವ ಗದ್ದಲವೂ, ಬಾಗಿಲು ಕಾಯುವ ಮುದುಕಿಯು ತನ್ನ ಶಕ್ತಿಯಿದ್ದಷ್ಟೂ ಗಟ್ಟಿಯಾಗಿ ಆರ್ತ ಧ್ವನಿಯಿಂದ ಕೂಗಿಕೊಳ್ಳುತ್ತಿದ್ದುದೂ ಕೇಳಿ ಸಿತು.

ಆ ಮುದುಕಿಯು, 'ಮಹಾ ಸ್ವಾಮಿಾ, ದೇವರ ಸಾಕ್ಷಿಯಾ ಗಿಯೂ ಪ್ರಮಾಣಮಾಡಿ ಹೇಳುತ್ತೇನೆ. ಈ ದಿನ ಹಗಲೆಲ್ಲ ನಾ ನಿಲ್ಲಿಯೇ ಕಾದಿದ್ದೇನೆ. ಕ್ಷಣ ಕಾಲವೂ ನಾನು ಈ ಬಾಗಿಲನ್ನು ಬಿಟ್ಟುಹೋಗಲಿಲ್ಲ. ಹಗಲಿನಲ್ಲಾಗಲಿ, ಈ ಸಾಯಂಕಾಲವಲ್ಲಿ

ಯಾಗಲಿ, ಯಾರೊಬ್ಬರೂ ಇಲ್ಲಿಗೆ ಬರಲೂ ಇಲ್ಲ; ಒಳಗೆ ಹೋಗಲೂ ಇಲ್ಲ,' ಎಂದು ಕೂಗಿಕೊಂಡಳು.

ಅದಕ್ಕೆ ಒಬ್ಬನು, 'ಆದರೆ ಈ ಕೊಠಡಿಯಲ್ಲಿ ದೀಪವಿರುವುದಲ್ಲಾ!' ಎಂದನು. ಒಳಗಿದ್ದವರಿಗೆ ಇದು ಜೇವರ್ಟನ ಧ್ವನಿಯೆಂದು ಗೊತ್ತಾಯಿತು.

ಆ ಕೊಠಡಿಯ ಬಾಗಿಲನ್ನು ತೆರೆದಾಗ ಕದವು ಒಳಗಡೆಯ ಬಲ ಭಾಗದ ಗೋಡೆಯ ಮೂಲೆಗೆ ಅಡ್ಡಲಾಗಿ ಮುಚ್ಚಿಕೊಳ್ಳುವಂತೆ ಇತ್ತು. ಜೀನ್ ವಾಲ್ಜೀನನು ದೀಪವನ್ನೂದಿ ತಾನು ಈ ಬಾಗಿಲ ಹಿಂದಣ ಮೂಲೆಯಲ್ಲಿ ಅವಿತುಕೊಂಡನು.

ಸಿಸ್ಟರ್ ಸಿಂಪ್ಲಿಸಳು ಮೇಜಿನ ಮುಂದೆ ಮೊಣಕಾಲೂರಿ ದೇವರ ಪ್ರಾರ್ಥನೆ ಮಾಡಲು ಕುಳಿತಳು.

ಬಾಗಿಲು ತೆರೆಯಿತು.

ಜೇವರ್ಟನು ಒಳಗೆ ಬಂದನು.

ಅನೇಕ ಜನರು ಪಿಸುಗುಟ್ಟುತ್ತಿರುವುದೂ ಮತ್ತು ಬಾಗಿಲ ಮುದುಕಿಯು, ಒಳಗೆ ಬರುವವರನ್ನು ತಡೆದು, ಕೂಗಿಕೊಳ್ಳುತ್ತಿದ್ದುದೂ ಸಹ ಕೊಠಡಿಯಲ್ಲಿರುವವರಿಗೆ ಚೆನ್ನಾಗಿ ಕೇಳಿ ಬಂತು. ಸಿಂಪ್ಲಿಸಳು ಕಣ್ಣನ್ನು ತೆರೆಯಲಿಲ್ಲ. ದೇವರ ಪ್ರಾರ್ಥನೆಯಲ್ಲಿಯೇ ಇದ್ದಳು. ಇನ್ನೊಂದು ಮೇಣದ ಬತ್ತಿಯು ಮಂಕಾಗಿ ಉರಿಯುತ್ತಿತ್ತು.

ಈ ಸ್ಥಿತಿಯನ್ನು ನೋಡಿ, ಜೇವರ್ಟನಿಗೆ, ಅಲ್ಲಿಂದ ಹೊರಟು ಹೋಗೋಣವೆಂಬ ಭಾವವು ಹುಟ್ಟಿತು.

ಆದರೆ ಕರ್ತವ್ಯವು ಅಲ್ಲಿಂದ ಹೊರಡದಂತೆ ಇವನನ್ನು ಬಲಾತ್ಕರಿಸಿ ತಡೆಯಿತು. ಇದರಿಂದ, ಇಲ್ಲಿಯೇ ನಿಂತು ಆಕೆಯನ್ನು ಒಂದು ಪ್ರಶ್ನೆಯನ್ನಾದರೂ ಕೇಳಿಯೇ ಬಿಡೋಣವೆಂಬ ಎರಡನೆಯ ಆಲೋಚನೆಯು ಇವನ ಮನಸ್ಸಿನಲ್ಲಿ ಹುಟ್ಟಿತು.

ಸಿಸ್ಟರ್ ಸಿಂಪ್ಲಿಸಳು ತನ್ನ ಜನ್ಮಾವಧಿಯಾಗಿ ಸುಳ್ಳನ್ನು

ಹೇಳಿದವಳೇ ಅಲ್ಲ. ಈ ವಿಚಾರವು ಜೇವರ್ಟನಿಗೆ ತಿಳಿದಿತ್ತು. ಇದಕ್ಕಾಗಿಯೇ ಅವನು ಈಕೆಯಲ್ಲಿ ಬಹಳ ಗೌರವವನ್ನಿಟ್ಟಿದ್ದನು.

'ಅಮ್ಮಾ! ಈ ಕೊಠಡಿಯಲ್ಲಿ ನೀವು ಒಬ್ಬರೇ ಇರುವಿರಾ?' ಎಂದನು.

ಈ ಸಮಯಕ್ಕೆ ಬಾಗಿಲು ಕಾಯುವ ಆ ಬಡ ಮುದುಕಿಗೆ ಕೈಕಾಲುಗಳು ಗಡಗಡನೆ ನಡುಗಿ ಅವಳು ಒಂದು ಕ್ಷಣ ಮಾತ್ರ ತಲ್ಲಣಿಸಿ ಹೋದಳು.

ಸಿಂಪ್ಲಿಸಳು ಕಣ್ಣೆತ್ತಿ ನೋಡಿ, 'ಅಹುದು,' ಎಂದು ಉತ್ತರ ಕೊಟ್ಟಳು.

ಅನಂತರ ಜೇವರ್ಟನು, 'ತಾಯಿ, ನಾನು ಮತ್ತೆ ಕೇಳುವೆನೆಂದು ಬೇಸರಪಡಕೂಡದು, ನನ್ನನ್ನು ಕ್ಷಮಿಸಬೇಕು.—ಇದು ನನ್ನ ಕರ್ತವ್ಯವು. ಈ ದಿನ ಒಬ್ಬ ಪುರುಷನು ಸೆರೆಮನೆಯಿಂದ ತಪ್ಪಿಸಿಕೊಂಡು ಹೋಗಿರುವನು. ನಾವು ಅವನನ್ನು ಹುಡುಕುತ್ತಿರುವೆವು. ಅವನ ಹೆಸರು ಜೇನ್ ವಾಲ್ಜೀನ್ ಎಂದು. ಅವನನ್ನು ನೀವು ಈ ದಿನ ಸಾಯಂಕಾಲ ಇಲ್ಲಿ ನೋಡಲಿಲ್ಲವೇ?' ಎಂದು ಮತ್ತೆ ಕೇಳಿದನು.

ಸಿಂಪ್ಲಿಸಳು, 'ಇಲ್ಲ,' ಎಂದುತ್ತರ ಕೊಟ್ಟಳು.

ಆಕೆ ಸುಳ್ಳನ್ನು ಹೇಳಿದಳು. ಒಂದರ ಮೇಲೊಂದರಂತೆ ಎರಡು ಸುಳ್ಳುಗಳನ್ನು ಒಟ್ಟಿಗೆ, ಸ್ವಲ್ಪವೂ ಅನುಮಾನಿಸದೆ, ಸುಳ್ಳಿನಲ್ಲಿ ನಿಪುಣಳಂತೆ ಬೇಗನೆ ಹೇಳಿಬಿಟ್ಟಳು.

'ತಾಯಿ, ಕ್ಷಮಿಸಬೇಕು,' ಎಂದು ಹೇಳಿ ಜೇವರ್ಟನು ಗೌರವದಿಂದ ಬಾಗಿ ನಮಸ್ಕರಿಸಿ ಹೊರಟು ಹೋದನು.

ಸತ್ಯವಾದಿನಿಯಾಗಿದ್ದ ಸಿಂಪ್ಲಿಸಳ ಈ ಧೃಢವಾದ ಉತ್ತರವು ಸತ್ಯವೆಂದು ಜೇವರ್ಟನ ಮನಸ್ಸಿನಲ್ಲಿ ನಿರ್ಧರವಾಯಿತು. ಇದರಿಂದ, ಅಲ್ಲಿ ಆಗತಾನೇ ಆರಿಸಿ ಮೇಜಿನ ಮೇಲೆ ಹೊಗೆಯಾಡುತ್ತಿದ್ದ ದೀಪದ ವಿಷಯವಾಗಿಯೂ ಅವನಿಗೆ ಅನುಮಾನವೂ ಬರಲಿಲ್ಲ.

ಒಂದು ಗಂಟೆಯು ಕಳೆದ ಮೇಲೆ, ಅದೇ ರಾತ್ರಿ, ಕತ್ತಲೆಯಲ್ಲಿ, ಮರಗಳ ಕೆಳಗೆ ಒಬ್ಬ ಪುರುಷನು ಮಾ——ಸರ್——ಮಾ——ಮನೆಯಿಂದ ಪ್ಯಾರಿಸ್ ನಗರದ ಕಡೆಗೆ ಬೇಗಬೇಗನೆ ಹೋಗುತ್ತಿದ್ದನು. ಇವನು ಯಾರು? ಜೀನ್ ವಾಲ್ಜೀನನೆ! ಇವನು ಒಂದು ಗಂಟನ್ನು ಹೊತ್ತುಕೊಂಡು ಹೋಗುತ್ತಿದ್ದನೆಂತಲೂ, ಮೇಲೆ ವಸ್ತ್ರವನ್ನು ಹೊದ್ದಿದ್ದನೆಂತಲೂ, ಇವನನ್ನು ಸಂಧಿಸಿದ ಇಬ್ಬರು ಮೂವರು ಬಂಡಿಹೊಡೆಯುವವರು ಸಾಕ್ಷ್ಯ ಹೇಳಿದುದರ ಮೇಲೆ ಇವನ ಮೇಲೆ ಅಪರಾಧವು ಸ್ಥಿರಪಟ್ಟಿತು. ಇವನು ತನ್ನ ಹಣವನ್ನೂ ಮೇಣದ ಬತ್ತಿಯ ಕೊಳವೆಗಳನ್ನೂ ಹೂತಿಡಲು ಬ್ಲೇರಿ ಪಟ್ಟಣದ ಬಳಿಯ ಅರಣ್ಯಕ್ಕೆ ಹೋಗುತ್ತಿದ್ದನೆಂಬುದು ಅವರಿಗೆ ಗೊತ್ತಿರಲಿಲ್ಲ.

---

ಎರಡು ವರ್ಷಗಳಾದ ಮೇಲೆ ಜೀನ್ ವಾಲ್ಜೀನನನ್ನು ಅಪರಾಧಿಯಾಗಿ ಸೇರಿಸಿದ್ದ ಹಡಗು ಟೂಲಾನ್ ಪಟ್ಟಣದ ರೇವಿಗೆ ಬಂದು ನಿಂತಿತು. ನಾವಿಕರಲ್ಲಿ ಒಬ್ಬನು ಹಡಗಿನ ಪಟವನ್ನು ಸುರುಳಿ ಸುತ್ತುತ್ತಿರುವಾಗ ಮೇಲಿನಿಂದ ಜಾರಿಬಿದ್ದು, ಕೈಗೆ ಸಿಕ್ಕಿದ ಒಂದು ಹಗ್ಗವನ್ನು ಮಾತ್ರ ಹಿಡಿದುಕೊಂಡು ಜೋಲಾಡುತ್ತಿದ್ದನು. ಇದನ್ನು ನೋಡಿ ಜೀನ್ ವಾಲ್ಜೀನನು, ತನ್ನನ್ನು ಕಟ್ಟಿದ್ದ ಕಬ್ಬಿಣದ ಬೇಡಿಯನ್ನು ಕಿತ್ತೊಗೆದು, ಆ ಮನುಷ್ಯನಿಗೆ ಸಹಾಯ ಮಾಡಿ ಅವನನ್ನು ಉಳಿಸಲು ಅಪ್ಪಣೆಯನ್ನು ಪಡೆದು ಹೋಗಿ ಅವನಿಗೆ ಸಹಾಯಮಾಡಿ ಕಾಪಾಡಿದನು. ಆದರೆ ಈ ಕಾರ್ಯಮಾಡುವಾಗ ತಾನೇ ಸಮುದ್ರದಲ್ಲಿ ಬಿದ್ದುಬಿಟ್ಟನು. ಆ ದಿನವೆಲ್ಲವೂ ಅವನನ್ನು ಸಮುದ್ರದಲ್ಲಿ ಹುಡುಕಿದರೂ ಪ್ರಯೋಜನವಾಗಲಿಲ್ಲ. ವರ್ತಮಾನ ಪತ್ರಿಕೆಗಳಲ್ಲಿ, ಜೀನ್ ವಾಲ್ಜೀನ್ ಎಂಬ ಶಿಕ್ಷಿತನಾದ ಅಪರಾಧಿಯು ಟೂಲಾನ್ ಪಟ್ಟಣದ ರೇವಿನಲ್ಲಿ ಸಮುದ್ರದ ಪಾಲಾದನೆಂದು ಪ್ರಕಟಿಸಲ್ಪಟ್ಟಿತು.

ನಿಜಾಂಶವೇನೆಂದರೆ: ಅವನು ಹೇಗೋ ನೀರಿನ ಒಳಭಾಗದಲ್ಲಿಯೇ ಈಜಿಕೊಂಡು ಹೋಗಿ, ಲಂಗರುಹಾಕಿ ದೋಣಿಯನ್ನು ಕಟ್ಟಿದ್ದ ಒಂದು ಹಡಗಿನ ಬಳಿಗೆ ಬಂದು, ರಾತ್ರಿಯಾಗುವವರೆಗೂ ಆ ದೋಣಿಯಲ್ಲಿ ಅಡಗಿಕೊಂಡಿದ್ದನು. ಅನಂತರ ಆ ರಾತ್ರಿ ನೀರಿನಲ್ಲಿ ಈಜಿಕೊಂಡು ಹೋಗಿ ಸಮೀಪವಾಗಿದ್ದ ಒಂದು ಊರನ್ನು ಸೇರಿದನು. ಈ ಊರಿನಲ್ಲಿ ಕಳ್ಳತನದಿಂದ ತಪ್ಪಿಸಿಕೊಂಡುಬಂದ ಅಪರಾಧಿಗಳಿಗೆ ಗೋಪ್ಯವಾಗಿ ಉಡುಪುಗಳನ್ನು ಬೆಲೆಗೆ ಕೊಡುತ್ತಿದ್ದ ಒಂದು ಸಣ್ಣ ಅಂಗಡಿಯಿತ್ತು. ಅಲ್ಲಿ ತಕ್ಕ ಉಡುಪನ್ನು ಕೊಂಡು ಪ್ಯಾರಿಸ್ ನಗರಕ್ಕೆ ನಡೆದುಕೊಂಡು ಹೋದನು.

ಕೆಲವು ವಾರಗಳನಂತರ ಆ ನಗರವನ್ನು ಸೇರಿ, ಬಹಳ ಗೋಪ್ಯವಾದ ಯಾವುದೋ ಬೀದಿಯಲ್ಲಿ ಒಂದು ಮನೆಯನ್ನು

ಗೊತ್ತುಮಾಡಿಕೊಂಡು ನಿಂತು ಅಲ್ಲಿಂದ ಕೋಸೆಟ್ಟಳು ವಾಸವಾಗಿದ್ದ ಊರಿಗೆ ಹೊರಟನು.

ಅಲ್ಲಿ ಸತ್ರ್ರದ ಯಜಮಾನನಾದ ಥೆನಾರ್ಡಿಯರ್ ಎಂಬುವನೂ ಅವನ ಹೆಂಡತಿಯೂ ಕೋಸೆಟ್ಟಳನ್ನು ಗುಲಾಮಳನ್ನಾಗಿಟ್ಟುಕೊಂಡು ಬಹಳ ಕ್ರೂರತನದಿಂದ ಹಿಂಸೆಮಾಡುತ್ತಿದ್ದರು. ಅವನು ಅಲ್ಲಿಗೆ ಹೋದ ಮಾರನೆಯ ದಿನ, ಕೋಸೆಟ್ಟಳು ಆ ಯಜಮಾನನ ಹೆಣ್ಣು ಮಕ್ಕಳ ಒಂದು ಬೊಂಬೆಯನ್ನು ಮುಟ್ಟಿದಳೆಂದು ಅವಳನ್ನು ಅವರು ವಿಪರೀತವಾಗಿ ಹೊಡೆದು ಚೆಚ್ಚಿದರು. ಅದನ್ನು ಕಂಡ ಜೀನ್ ವಾಲ್ಜೀನನು ಕೂಡಲೆ ಹೋಗಿ ಅಂದವಾದ ಒಂದು ಬೊಂಬೆಯನ್ನು ಅವಳಿಗಾಗಿ ತಂದುಕೊಟ್ಟನು. ಅವಳ ಕಣ್ಣಿಗೆ ಅದು ಸುಂದರಳಾದ ರಾಜಪುತ್ರಿಯಂತೆ ಕಂಡಿತು. ಅವಳು ಅದಕ್ಕೆ ಕ್ಯಾಥರೈನ್ ಎಂದು ಹೆಸರಿಟ್ಟು, ಆ ರಾತ್ರಿ ತನ್ನ ಪಕ್ಕದಲ್ಲಿಯೇ ಮಲಗಿಸಿಕೊಂಡಳು.

ಮಾರನೆಯ ದಿನ ಜೀನ್ ವಾಲ್ಜೀನನು ಆ ಸತ್ರ್ರದ ಯಜಮಾನನಿಗೆ ಒಂದು ಸಾವಿರದ ಐದು ನೂರು ಫ್ರಾಂಕುಗಳನ್ನು ಕೊಟ್ಟು ಕೋಸೆಟ್ಟಳನ್ನು ಅವನಿಂದ ಬಿಡಿಸಿಕೊಂಡು ಪ್ಯಾರಿಸ್ ನಗರದಲ್ಲಿ ಮುಂಚೆಯೇ ತಾನು ಗೊತ್ತುಮಾಡಿ ಹೋಗಿದ್ದ 'ಗಾರ್‌ಬ್ಯೂ ಮಂದಿರ'ವೆಂಬ ಗೋಪ್ಯವಾದ ವಾಸಸ್ಥಾನಕ್ಕೆ ಕರೆದೊಯ್ದನು.

ಮಾರನೆಯ ದಿನ ಬೆಳಗಾದ ಕೂಡಲೇ ಜೀನ್ ವಾಲ್ಜೀನನು, ಕೋಸೆಟ್ಟಳು ಮಲಗಿದ್ದ ಹಾಸುಗೆಯ ಬಳಿಯಲ್ಲಿ ಬಂದು ಕುಳಿತು, ಅವಳು ಎಚ್ಚರವಾಗುವುದನ್ನೇ ನಿರೀಕ್ಷಿಸುತ್ತ, ಅಲುಗಾಡದೆ ಇದ್ದನು.

ಅವನ ಆತ್ಮದಲ್ಲಿ ಒಂದು ಬಗೆಯ ಹೊಸ ವ್ಯಾಮೋಹ ಮೂಡುತ್ತಲಿತ್ತು. ಇವನು ಕೋಸೆಟ್ಟಳನ್ನು ನೋಡಿದಾಗಲೂ, ಸತ್ರ್ರದ ಯಜಮಾನನಿಂದ ಬಿಡಿಸಿ ಅವಳನ್ನು ತನ್ನ ಪೋಷಣೆಗೆ ಕರೆದುಕೊಂಡಾಗಲೂ, ಅವಳನ್ನು ಎತ್ತಿಕೊಂಡು ಬಂದು ಕಷ್ಟ

ಪರಂಪರೆಗಳಿಂದ ಪಾರುಮಾಡಿದಾಗಲೂ, ಅವನ ಹೃದಯವು ಅವಳಿಗಾಗಿ ಬಹಳ ಮರುಕಗೊಂಡಿತ್ತು. ಕಷ್ಟದೆಸೆಯಿಂದ ಹುಟ್ಟಿದ ಕನಿಕರವೂ ಮತ್ತು ಅತ್ಯಂತ ಪ್ರೀತಿಯಿಂದ ಮೊಳೆತ ವ್ಯಾಮೋಹವೂ ಆ ಮಗುವಿನ ಕಡೆಗೆ ಈಗ ಉಕ್ಕಿ ಪ್ರವಹಿಸಿತು.

ಅವನಿಗೆ ತನ್ನ ಮನಸ್ಸಿನಲ್ಲಿ ಗೋಚರವಾದ ಶುದ್ಧಚಾತ್ಯಾಕೃತಿಗಳಲ್ಲಿ ಇದು ಎರಡನೆಯದು. ಅವನ ಮನಃಪ್ರಪಂಚದಲ್ಲಿ, ಪಾದ್ರಿಯು ಸೌಜನ್ಯವನ್ನು ಉದ್ಭವಗೊಳಿಸಿದ್ದನು. ಕೋಸೆಟ್ಟಳು ಪ್ರೇಮಗುಣವನ್ನು ಉದ್ಭವಗೊಳಿಸಿದಳು.

ಕೋಸೆಟ್ಟಳಿಗೆ ಓದನ್ನು ಕಲಿಸುವುದೂ, ಅವಳು ಆಡುವುದನ್ನು ನೋಡುವುದೂ, ಇವೇ ಜೀನ್ ವಾಲ್ಜೀನನ ಜೀವನದ ವ್ಯವಸಾಯವಾದವು. ಅಲ್ಲದೆ ಅವನು ಅವಳ ಸಂಗಡ ಅವಳ ತಾಯಿಯ ವಿಚಾರವಾಗಿ ಮಾತನಾಡುತ್ತಲೂ ಅವಳಿಗೆ ದೇವರ ಪ್ರಾರ್ಥನೆಯನ್ನು ಹೇಳಿಕೊಡುತ್ತಲೂ ಇದ್ದನು.

ಅವಳು ಅವನನ್ನು 'ಅಪ್ಪ! ಅಪ್ಪ!' ಎಂದು ಕರೆಯುತ್ತಿದ್ದಳು. ಇವಳಿಗೆ ಇದಲ್ಲದೆ ಅವನ ಬೇರೆ ಹೆಸರೇ ತಿಳಿಯದು.

ಅವನ ಮನೆಯ ಬಳಿಯ ಒಂದು ಮೂಲೆಯಲ್ಲಿ ಒಬ್ಬ ತಿರುಕನು ಕುಳಿತು ಬೇಡುತ್ತಿದ್ದನು. ಜೀನ್ ವಾಲ್ಜೀನನು ಆ ಮಾರ್ಗವಾಗಿ ಹೋದಾಗಲೆಲ್ಲಾ ಅವನಿಗೆ ಕಾಸುಗಳನ್ನು ಕೊಡುವ ರೂಢಿಯಾಯಿತು. ಒಂದು ದಿನ ಸಾಯಂಕಾಲ ಆ ತಿರುಕನ ಕೈಯಲ್ಲಿ ಇವನು ಕಾಸನ್ನು ಇಟ್ಟಾಗ, ತಿರುಕನು ತಲೆಯೆತ್ತಿ ಜೀನ್ ವಾಲ್ಜೀನನನ್ನು ಉದ್ದೇಶಪೂರ್ವಕವಾಗಿ, ಎವೆಯಿಕ್ಕದೆ ನೋಡಿದನು. ಅದು ತಿರುಕನ ಮುಖವಲ್ಲ—ಜೇವರ್ಟನದು.

ಕೆಲವು ದಿನಗಳಾದ ಮೇಲೆ ಜೀನ್ ವಾಲ್ಜೀನನಿಗೆ ತನ್ನ ಮನೆಯ ಮುಂಭಾಗದಲ್ಲಿ ಯಾರೋ ಹೊಸಬರು ಹೋಗಿ ಬರುತ್ತಿದ್ದ ಅಡಿಗಳ ಸಪ್ಪುಳವು ಕೇಳಿಸಿತು. ಅನಂತರ ಆ ಮನೆಯ ಯಜಮಾನಿಯಾದ ಮುದುಕಿಯನ್ನು ಕೇಳಿದುದರಲ್ಲಿ, ಜೇವರ್ಟನು ಆ ಮನೆಯಲ್ಲಿ ಒಂದು ಕೊಠಡಿಯನ್ನು ಬಾಡಿಗೆಗೆ ತೆಗೆದುಕೊಂಡಿರು

ವುದಾಗಿ ತಿಳಿಯುಬಂತು. ಮಾರನೆಯ ದಿನ ಪ್ರಾತಃಕಾಲ ಜೇವರ್ಟನು ಹೊರಗೆ ಹೋದುದನ್ನು ನೋಡಿ ಜೀನ್ ವಾಲ್ಜೀನನು, ಆ ಸಾಯಂಕಾಲ ಮಬ್ಬಾಗುತ್ತಲೇ, ತನ್ನ ಜೇಬಿನಲ್ಲಿ ಸ್ವಲ್ಪ ಹಣವನ್ನು ಹಾಕಿಕೊಂಡು, ಕೋಸೆಟ್ಟಳನ್ನು ಕೈಹಿಡಿದು ಕರೆದುಕೊಂಡು ಹೊರಗೆ ಹೊರಟುಹೋದನು.

ಅವರಿಬ್ಬರೂ ಕೆಲವು ಗಂಟೆಗಳ ಕಾಲ ಬೀದಿಯಿಂದ ಬೀದಿಯನ್ನು ದಾಟಿ ನಡೆದುಹೋದರು. ಅನಂತರ ನಾಲ್ಕು ಮಂದಿ ಇವರನ್ನು ಹಿಂಬಾಲಿಸಿ ಬರುತ್ತಿರುವರೆಂದು ಇವನಿಗೆ ಗೋಚರವಾಯಿತು. ಈ ನಾಲ್ಕು ಮಂದಿಯಲ್ಲಿ ಜೇವರ್ಟನು ಒಬ್ಬನಾಗಿದ್ದನೆಂಬುದನ್ನು ಜೀನ್ ವಾಲ್ಜೀನನು ಕಂಡು, ದಾರಿಯು ಎರಡಾಗಿ ಕವಲೊಡೆಯುವ ಸ್ಥಳದವರೆಗೂ ವೇಗವಾಗಿ ಹೋದನು. ಒಂದು ದಾರಿಯ ಕಡೆಯ ಭಾಗದಲ್ಲಿ ಒಂದು ಎತ್ತರವಾದ ಗೋಡೆಯಿತ್ತು. ಮತ್ತೊಂದರ ಕಡೆಯಲ್ಲಿ ಒಬ್ಬ ಪಹರೆಯುವನು ಇವನಿಗಾಗಿ ಕಾದಿದ್ದನು.

ಇಷ್ಟು ಹೊತ್ತಿಗೆ, ಸ್ವಲ್ಪ ದೂರದಲ್ಲಿ ಯಾರೋ ಮುಸುಕಿನಲ್ಲಿ ಕೂಗಿಕೊಂಡಂತೆ ಅಸ್ಪಷ್ಟವಾದ ಶಬ್ದವು ಕೇಳಿಸಿತು. ಜೀನ್ ವಾಲ್ಜೀನನು, ಧೈರ್ಯಮಾಡಿ ಆ ಬೀದಿಯ ಮೂಲೆಯ ಕಡೆಗೆ ತಿರುಗಿ, ಸುತ್ತಲೂ ನೋಡಿದನು. ಏಳೆಂಟು ಮಂದಿ ಸಿಪಾಯಿಗಳು ಗುಂಪಾಗಿ ಆಗತಾನೆ ರೂ ಪೋಲನ್‌ಸೂ ಎಂಬ ಆ ಬೀದಿಯ ಕಡೆಗೆ ತಿರುಗಿದ್ದರು. ಇವನಿಗೆ ಅವರ ಸನೀನುಗಳು ಥಳ ಗುಟ್ಟುವುದು ಕಾಣಿಸಿತು. ಅವರು ಇವನ ಕಡೆಗೇ ಬರುತ್ತಿದ್ದರು.

ಎತ್ತರವಾದ ಆಕಾರದ ಜೇವರ್ಟನೇ ಮುಖ್ಯಸ್ಥನಾಗಿದ್ದ ಈ ಗುಂಪಿನ ಸಿಪಾಯಿಗಳು, ಮೆಲ್ಲಗೂ ಬಹು ಎಚ್ಚರಿಕೆಯಿಂದಲೂ ಮುಂದು ಮುಂದಕ್ಕೆ ಬರುತ್ತಲೂ ಆಗಾಗ ಅಲ್ಲಲ್ಲೆ ನಿಲ್ಲುತ್ತಲೂ ಇದ್ದರು. ಇದರಿಂದ, ಅವರು ಅಲ್ಲಲ್ಲಿ ಗೋಡೆಗಳಲ್ಲಿರುವ ಸಂದುಗಳನ್ನೂ, ಬಾಗಿಲುಗಳನ್ನೂ, ಓಣಿಗಳನ್ನೂ, ಸಂದಿಗೊಂದಿಗಳನ್ನೂ ಪರೀಕ್ಷಿಸಿ ನೋಡುತ್ತಿದ್ದರೆಂಬುದು ಸ್ಪಷ್ಟವಾಯಿತು.

ಅವರು ಬರುತ್ತಿದ್ದ ವಿಳಂಬದಿಂದಲೂ, ಅವರು ಹಾಕುತ್ತಿದ್ದ ಹೆಜ್ಜೆಗಳ ರೀತಿಯಿಂದಲೂ, ಅವರು ಜೀನ್ ವಾಲ್ಜೀನನಿರುವ ಸ್ಥಳಕ್ಕೆ ಬರಲು ಸುಮಾರು ಕಾಲು ಗಂಟೆಯಾಗಬಹುದೆಂದು ಕಂಡಿತು. ಇದು ಬಹಳ ಭಯಂಕರ ಸಮಯವಾಗಿತ್ತು. ಅವನಿಗೆ ಇದು ಮೂರನೆಯಾವೃತ್ತಿ ಒದಗಿದ ಭಯಂಕರ ವಿಪತ್ತು. ಕೆಲವು ನಿಮಿಷಗಳ ಕಾಲದಲ್ಲಿಯೇ ಇವನಿಗೆ ಈ ವಿಪತ್ತು ಒದಗುವ ಸಂಭವವಿತ್ತು. ಈಗ ಆಗುವ ಗ್ಯಾಲಿಯ ಶಿಕ್ಷೆಯು ಅವನಿಗೆ ಮೊದಲಿನಂತಹ ಗ್ಯಾಲಿಯ ಶಿಕ್ಷೆಯಲ್ಲ. ಈಗ ಆಗುವ ಶಿಕ್ಷೆಯಿಂದ ಅವನು ಕೋಸೆಟ್ಟಳನ್ನು ನಿರಂತವಾಗಿ ಕಳೆದುಕೊಳ್ಳಬೇಕಾಗಿತ್ತು; ಎಂದರೆ ತನ್ನ ಪ್ರಾಣವನ್ನೇ ತೊರೆದು ಹಾಗೂ ಜೀವಿಸಿರಬೇಕಾಗಿತ್ತು.

ಒಂದು ವಿಷಯ ಮಾತ್ರವೇ ಈಗ ಸಾಧ್ಯವಾಗಿ ಕಂಡಿತು. ಜೀನ್ ವಾಲ್ಜೀನನ ರೀತಿಯು ಈಗ ಬಹಳ ವಿಲಕ್ಷಣವಾಗಿತ್ತು. ಅವನು ಒಂದು ಚೀಲದಲ್ಲಿ ಪರಿಶುದ್ಧನಾದ ಮಹಾ ಯೋಗಿಯ ಆಲೋಚನೆಗಳನ್ನೂ ಮತ್ತೊಂದು ಚೀಲದಲ್ಲಿ ಅಪರಾಧಿಯ ಅದ್ಭುತ ಬುದ್ಧಿ ಚಾತುರ್ಯಗಳನ್ನೂ ತುಂಬಿ ಹೆಗಲಿಗೆ ತೂಗ ಹಾಕಿಕೊಂಡಿರುವನಂತೆ ಇದ್ದನು. ಸಮಯ ಬಂದಂತೆ ಇವುಗಳಲ್ಲಿ ಅವಶ್ಯಕವಾದ ಒಂದೊಂದನ್ನೂ ಉಪಯೋಗಿಸಿಕೊಳ್ಳುತ್ತಿದ್ದನು.

ಇವನಿಗಿದ್ದ ಇತರ ಅನುಕೂಲ ಶಕ್ತಿಗಳ ಜೊತೆಗೆ, ಟೂಲಾನ್ ನಗರದ ಗ್ಯಾಲಿಗಳಿಂದ ತಪ್ಪಿಸಿಕೊಂಡು ಅನೇಕಾವೃತ್ತಿ ಓಡಿ ಬಂದು ಪಡೆದಿದ್ದ ಅನುಭವದಿಂದ ಇವನು ಅದ್ಭುತ ಸಾಹಸ ಕಾರ್ಯಗಳನೇಕಗಳಲ್ಲಿ ನಿಪುಣನಾಗಿದ್ದನು. ಸಮಯ ಬಿದ್ದಲ್ಲಿ ಕಡಿದಾದ ಗೋಡೆಯ ಮೇಲೆ ನೆಟ್ಟಗೆ ಆರು ಅಂತಸ್ತುಗಳವರೆಗಾದರೂ ಹತ್ತಿ ಹೋಗಬಲ್ಲ ಕುಶಲ ವಿದ್ಯೆಯನ್ನು ಇವನು ಕಲಿತಿದ್ದನೆಂದರೆ ನಂಬುವುದೇ ಕಷ್ಟವಾಗುವುದು. ಏಣಿಯಾಗಲಿ, ಕೊಚಗಳಾಗಲಿ ಯಾವುದೊಂದೂ ಇಲ್ಲದೆ ಕೇವಲ ಶರೀರ ಶಕ್ತಿಯನ್ನು ಮಾತ್ರವೇ ಉಪಯೋಗಿಸಿ, ಕುತ್ತಿಗೆಯ ಹಿಂಭಾಗ, ಭುಜಗಳು, ಮೊಣಕಾಲು

ಗಳು, ಇವುಗಳ ಸಹಾಯದಿಂದ, ಗೋಡೆಯಲ್ಲಿ ಮುಂದಕ್ಕೆ ಹೊರಟಿರುವ ಕಲ್ಲಿನ ತುಂಡುಗಳನ್ನು ಸಹ ಹಿಡಿದುಕೊಳ್ಳದೆ ನೆಟ್ಟಗೆ ಗೋಡೆಯ ಮೇಲೆ ಹತ್ತಿ ಹೋಗಬಲ್ಲ ಶಕ್ತಿಯು ಇವನಿಗೆ ಇತ್ತು.

ಜೀನ್ ವಾಲ್ಜೀನನು ಗೋಡೆಯನ್ನು ತನ್ನ ದೃಷ್ಟಿಯಿಂದಲೇ ಅಳತೆ ಹಾಕಿ ಅದರ ಮೇಲೆ ಒಂದು ಸಿಂಬೆಯ ಮರವಿದ್ದುದನ್ನು ಕಂಡನು. ಗೋಡೆಯು ಸುಮಾರು ಹದಿನೆಂಟು ಅಡಿ ಎತ್ತರವಿತ್ತು. ಈ ಗೋಡೆಯಿದ್ದ ಭಾರಿ ಕಟ್ಟಡದ ಮೇಲಣ ತುದಿಯ ಮೂಲೆಯ ವರೆಗೆ ಬುಡದಿಂದ ತ್ರಿಕೋಣಾಕಾರವಾದ ಕಲ್ಲು ಕಟ್ಟಡವಿತ್ತು. ಈ ತ್ರಿಕೋಣದ ಭಾಗವು ಸುಮಾರು ಐದು ಅಡಿ ಎತ್ತರವಿತ್ತು. ಆದುದರಿಂದ, ಗೋಡೆಯ ಮೇಲ್ಭಾಗವನ್ನು ಸೇರಲು ಸುಮಾರು ಹದಿನಾಲ್ಕು ಅಡಿಗಳ ದೂರ ಹತ್ತಬೇಕಾಗಿತ್ತು.

ಈ ಗೋಡೆಯ ಮೇಲೆ ಒಂದು ಚಪ್ಪಟೆ ಕಲ್ಲನ್ನು ಹಾಕಿ ಕಟ್ಟಿದ್ದರು. ಆದರೆ ಸ್ವಲ್ಪವಾದರೂ ಅದು ಮುಂದಕ್ಕೆ ಬಂದು, ಹಿಡಿದುಕೊಳ್ಳಲನುಕೂಲವಾಗಿರಲಿಲ್ಲ.

ಈಗ ಕೋಸೆಟ್ಟಳದೇ ದೊಡ್ಡ ಕಷ್ಟವಾಗಿತ್ತು. ಅವಳಿಗೆ ಗೋಡೆಯನ್ನು ಹತ್ತಲು ಬಾರದು. ಅವಳನ್ನು ಬಿಟ್ಟುಬಿಡಬೇಕೇ? ಜೀನ್ ವಾಲ್ಜೀನನಿಗೆ ಈ ಆಲೋಚನೆಯೇ ಬರಲಿಲ್ಲ. ಅವಳನ್ನು ಎತ್ತಿಕೊಂಡು ಹೋಗುವುದು ಅಸಾಧ್ಯ. ಇಷ್ಟು ಕಠಿಣವಾದ ಕಡೆಗಳಲ್ಲಿ ಹತ್ತುವುದಕ್ಕೆ ಮನುಷ್ಯನ ಶಕ್ತಿಯೆಲ್ಲವೂ ಬೇಕಾಗಿತ್ತು. ಸ್ವಲ್ಪ ಭಾರಹೊತ್ತಿದ್ದರೂ ಹತ್ತುವ ಮನುಷ್ಯನು ಪವನ ತಪ್ಪಿ ಕೆಳಗೆ ಬೀಳುವನು.

ಅವನಿಗೆ ಒಂದು ಹಗ್ಗವು ಬೇಕಾಗಿತ್ತು. ಆ ರೂ ಪೋಲನ್ ಸೂ ಬೀದಿಯಲ್ಲಿ ಆ ಅರ್ಧ ರಾತ್ರಿಯಲ್ಲಿ ಅವನಿಗೆ ಹಗ್ಗವೆಲ್ಲಿ ಸಿಕ್ಕ ಬೇಕು? ನಿಜವಾಗಿಯೂ ಆ ಸಮಯದಲ್ಲಿ ಜೀನ್ ವಾಲ್ಜೀನನು ರಾಜನಾಗಿದ್ದಿದ್ದರೆ ಒಂದು ಹಗ್ಗಕ್ಕಾಗಿ ತನ್ನ ರಾಜ್ಯವನ್ನೇ ಕೊಟ್ಟು ಬಿಡುತ್ತಿದ್ದನು.

ಇಂತಹ ಪರೀಕ್ಷೆಯ ಕಷ್ಟ ಸಂಧಿಗಳಲ್ಲೆಲ್ಲ, ಜನರಿಗೆ ಒಂದು ವಿದ್ಯುತ್ಪ್ರಕಾಶವು ಹೊಳೆದು ದಿಕ್ಕು ತೋರದಂತಾಗುವುದು. ಮಿಂಚಿನೋಪಾದಿಯಲ್ಲಿ ಕೆಲವು ದಿಕ್ಕುತೋರಿಸುವುದೂ ಉಂಟು.

ನಿರಾಶನಾಗಿ ದಿಕ್ಕು ತೋರದೆ ನೋಡುತ್ತಿದ್ದ ಜೀನ್ ವಾಲ್ಜೀನನ ದೃಷ್ಟಿಯು ಕಲ್ ಡಿ ಸ್ಯಾಕ್ ಜೆನ್‌ರಾಟ್ ಎಂಬ ಮುಂದಣ ಬೀದಿಯ ದೀಪದ ಕಂಬದ ಮೇಲೆ ಬಿತ್ತು. ದೀಪಗಳನ್ನು ಮೇಲಕ್ಕೆ ಏಳೆಯುವುದಕ್ಕೂ ಕೆಳಕ್ಕೆ ಇಳಿಸುವುದಕ್ಕೂ ಉಪಯೋಗಿಸುವ ಒಂದು ಹಗ್ಗವು ಆ ದೀಪದ ಕೆಳಗಿನ ಚಿಕ್ಕ ಕಬ್ಬಿಣದ ಪೆಟ್ಟಿಗೆಯಲ್ಲಿರುವುದೆಂಬುದು ಅವನಿಗೆ ತಿಳಿದಿತ್ತು. ತನ್ನ ಕಟ್ಟಕಡೆಯ ಪ್ರಯತ್ನವೆಂದು, ಶಕ್ತಿಯೆಲ್ಲವನ್ನೂ ಪ್ರಯೋಗಿಸಿ ಒಂದು ನೆಗೆತಕ್ಕೆ ಹಾರಿ ಆ ಬೀದಿಯನ್ನು ದಾಟಿ ಕಲ್ ಡಿ ಸ್ಯಾಕ್ ಬೀದಿಗೆ ಹೋಗಿ, ಆ ಚಿಕ್ಕ ಕಬ್ಬಿಣದ ಪೆಟ್ಟಿಗೆಯ ಚಿಲುಕವನ್ನು ತನ್ನ ಚಾಕುವಿನ ಮೊನೆಯಿಂದ ಎಬ್ಬಿ, ಒಂದು ನಿಮಿಷ ಮಾತ್ರದಲ್ಲಿ ಹಗ್ಗದೊಡನೆ ಮತ್ತೆ ಕೋಸೆಟ್ಟಳ ಬಳಿಗೆ ಬಂದು ಸೇರಿದನು. ಹಗ್ಗವು ಸಿಕ್ಕಿತು. ಜೀವದ ಮೇಲಣ ಆಸೆಯನ್ನು ತೊರೆದು ಮೃತ್ಯುವಿನೊಡನೆ ಹೀಗೆ ಹೋರಾಡುವುದರಲ್ಲಿ ಸಮಯೋಚಿತವಾದ ಉಪಾಯಗಳನ್ನು ಕಂಡುಹಿಡಿಯುವ ಧೀರರು ಸಮಯಬಿದ್ದಾಗ ಮಿಂಚಿನಷ್ಟು ವೇಗವಾಗಿ ಕೆಲಸಮಾಡಬಲ್ಲರು. ಅನಂತರ ಜೇವರ್ಟನೂ ಸಿಪಾಯಿಗಳೂ ಯಾವ ಕ್ಷಣದಲ್ಲಿ ಬಂದುಬಿಡುವರೋ ಎಂಬ ವಿಪತ್ಸಮಯದಲ್ಲಿಯೂ ಸಹ ಆತುರಪಡದೆ ದೃಢಸಂಕಲ್ಪದಿಂದ ವೇಗವಾಗಿ ತನ್ನ ಉದ್ದವಾದ ಕೊರಳ ಪಟ್ಟಿಯನ್ನು ತೆಗೆದು ಕೋಸೆಟ್ಟಳ ಕಂಕುಳ ಕೆಳಗಿನಿಂದ ಅವಳಿಗೆ ನೋವಾಗದಂತೆ ಮೃದುಸುತ್ತಿನೂ ಬಳಸಿ ಕಟ್ಟಿ, ಆ ಪಟ್ಟಿಯನ್ನು ನಾವಿಕರು ಕಟ್ಟುವಂತಹ ಬಿಗಿಯಾದ ಮುಡಿಹಾಕಿ ಹಗ್ಗದ ಕೊನೆಗೆ ಕಟ್ಟಿ, ಹಗ್ಗದ ಇನ್ನೊಂದು ಕೊನೆಯನ್ನು ತಾನು ಹಲ್ಲಿನಲ್ಲಿ ಕಚ್ಚಿಕೊಂಡು, ತನ್ನ ಕಾಲಿನಲ್ಲಿದ್ದ ಜೋಡನ್ನೂ ಕಾಲುಚೀಲಗಳನ್ನೂ ತೆಗೆದು ಗೋಡೆಯ ಮೇಲಕ್ಕೆ ಎಸೆದು, ಕಲ್ಲುಕಟ್ಟಡದ ಮೇಲೆ

ಹತ್ತಿ, ಗೋಡೆಯನ್ನು ಏರಲಾರಂಭಿಸಿದನು. ಅವನು ಹತ್ತುವ ಧೈರ್ಯವನ್ನೂ ರೀತಿಯನ್ನೂ ನೋಡಿದರೆ ಅವನ ಕಾಲುಗಳಿಗೂ ಮೊಣಕೈಗಳಿಗೂ ಏಣಿಯ ಮೆಟ್ಟಲುಗಳೇ ಸಿಕ್ಕುತ್ತಿದ್ದುವೆಂಬಂತೆ ಕಂಡಿತು. ಅರ್ಧ ನಿಮಿಷವಾಗುವುದಕ್ಕೆ ಮೊದಲೇ ಅವನು ಗೋಡೆಯನ್ನೇರಿ ಮೊಣಕಾಲಿನ ಮೇಲೆ ಕುಳಿತನು.

ಕೋಸೆಟ್ಟಳು ದಿಕ್ಕು ತೋರದೆ ಮುಗ್ಧಳಾಗಿ ಒಂದು ಮಾತನ್ನೂ ಆಡದೆ ಸುಮ್ಮನೆ ನೋಡುತ್ತಿದ್ದಳು. ತಟ್ಟನೆ ಅವಳ ಕಿವಿಗೆ ಜೀನ್ ವಾಲ್ಜೀನನು ಪಿಸುಮಾತಿನಲ್ಲಿ, 'ಗೋಡೆಗೆ ಬೆನ್ನನ್ನು ಒತ್ತಿಕೋ,' ಎಂದು ಹೇಳಿದುದು ಕೇಳಿಸಿತು. ಅವಳು ಅದರಂತೆಯೇ ಮಾಡಿದಳು.

ಜೀನ್ ವಾಲ್ಜೀನನು, 'ಮಾತನಾಡಬೇಡ, ಭಯಪಡಬೇಡ,' ಎಂದನು. ಅವಳಿಗೆ ತನ್ನನ್ನು ನೆಲದಮೇಲಿನಿಂದ ಎತ್ತಿದುದೇನೋ ಗೊತ್ತಾಯಿತು. ತಾನು ಎಲ್ಲಿರುವೆನೆಂಬುದನ್ನು ಅವಳು ಆಲೋಚಿಸಿ ತಿಳಿದುಕೊಳ್ಳುವುದಕ್ಕೆ ಮೊದಲೇ ಗೋಡೆಯ ಮೇಲಕ್ಕೆ ಬಂದುಬಿಟ್ಟಳು.

ಜೀನ್ ವಾಲ್ಜೀನನು ಅವಳನ್ನು ಹಿಡಿದು ತನ್ನ ಬೆನ್ನಿಗೆ ಹಾಕಿಕೊಂಡು, ಅವಳ ಎರಡು ಕೈಗಳನ್ನೂ ತನ್ನ ಎಡಗೈಯಿಂದ ಹಿಡಿದು, ಬೋರಲಾಗಿ ಮಲಗಿ ಗೋಡೆಯ ಮೇಲೆ ಮೂಲೆಯವರೆಗೂ ತೆವಳಿಕೊಂಡು ಹೋದನು. ಅವನು ಊಹಿಸಿದಂತೆಯೇ ಅಲ್ಲಿ ಒಂದು ಕಟ್ಟಡವಿತ್ತು. ಅದರ ಚಾವಣಿಯು ಮೇಲಿನಿಂದ ನೆಲದ ಸಮೀಪದ ವರೆಗೂ ಸ್ವಲ್ಪ ಸ್ವಲ್ಪ ಇಳಿಜಾರಾಗಿ ನಿಂಬೆಯ ಮರದ ವರೆಗೂ ಹೋಗಿತ್ತು.

ಇದು ಒಂದು ಅನುಕೂಲ ಸಂದರ್ಭವೇ ಸರಿ. ಏತಕ್ಕೆಂದರೆ, ಗೋಡೆಯು, ಈ ಕಡೆಯಲ್ಲಿ, ಬೀದಿಯ ಕಡೆಯಲ್ಲಿರುವುದಕ್ಕಿಂತಲೂ, ಎತ್ತರವಾಗಿತ್ತು. ಜೀನ್ ವಾಲ್ಜೀನನಿಗೆ ನೆಲವು ಬಹಳ ಕೆಳಗೆ ಇರುವುದಾಗಿ ಕಂಡಿತು. ಅವನು ಆಗತಾನೇ ಚಾವಣಿಯ ಇಳಿಜಾರಿನ ಪ್ರದೇಶದ ವರೆಗೆ ಬಂದಿದ್ದನು; ಇನ್ನೂ ಗೋಡೆಯ

ಅಂಚನ್ನು ಬಿಟ್ಟಿರಲಿಲ್ಲ. ಅಷ್ಟರಲ್ಲಿಯೇ ಗಟ್ಟಿಯಾದ ಗದ್ದಲವು ಕೇಳಿಸಿದುದರಿಂದ ಸಿಪಾಯಿಗಳ ಗುಂಪು ಬಂತೆಂದು ಗೊತ್ತಾಯಿತು. ಜೇವರ್ಟನ ಸಿಡಿಲಿನಂತಹ ಧ್ವನಿಯೂ ಇವನಿಗೆ ಕೇಳಿಸಿತು.

'ಕಲ್ ಡಿ ಸ್ಯಾಕ್ ಸ್ಥಳದಲ್ಲಿ ಹುಡುಕಿರಿ! ರೂ ಡ್ರಾಯಿಟ್ ಮುರ್ ಬೀದಿಯಲ್ಲಿಯೂ ಪೆಟಿಟ್ ರೂ ಪಿಕ್ಪಸ್ ಬೀದಿಯಲ್ಲಿಯೂ ಕಾವಲಿಟ್ಟಿದೆ. ಅದಕ್ಕೆ ನಾನು ಹೊಣೆ. ಕಲ್ ಡಿ ಸ್ಯಾಕ್‌ನಲ್ಲಿಯೇ ಅವನಿದ್ದಾನೆ,' ಎಂದು ಜೇವರ್ಟನು ಹೇಳಿದನು.

ಸಿಪಾಯಿಗಳು ಕಲ್ ಡಿ ಸ್ಯಾಕ್ ಜೆನ್‌ರಾಟ್‌ನೊಳಕ್ಕೆ ನುಗ್ಗಿದರು. ಜೀನ್ ವಾಲ್ಜೀನನು ಕೋಸೆಟ್ಟಳನ್ನು ಹಿಡಿದುಕೊಂಡು ಮಾಳಿಗೆಯಿಂದ ಕೆಳಕ್ಕೆ ಜಾರಿಬಂದು ನಿಂಬೆಯ ಮರದ ಬಳಿಗೆ ಸೇರಿ ನೆಲಕ್ಕೆ ಧುಮ್ಮಿಕ್ಕಿದನು. ಭಯದಿಂದಲೋ ಅಥವಾ ಧೈರ್ಯದಿಂದಲೋ ಕೋಸೆಟ್ಟಳು ಒಂದು ಪಿಸುಮಾತನ್ನೂ ಸಹ ಆಡಿರಲಿಲ್ಲ.

---

ಜೆರೀನ್ ವಾಲ್ಜೀನನು ವಿಶಾಲವಾದ ಮತ್ತು ವಿಚಿತ್ರವಾದ ಒಂದು ತೋಟಕ್ಕೆ ಬಂದು ಇಳಿದನು. ಈ ತೋಟವು ಚಳಿಗಾಲದ ರಾತ್ರಿಯಲ್ಲಿ ಕಾಣುವಂತೆ ಮಂಕುಮಂಕಾಗಿತ್ತು. ಅಕಾಲವಾದುದರಿಂದ ಸ್ವಭಾವವಾಗಿ ಅಲ್ಲಿ ಯಾರೂ ಇರಲಿಲ್ಲ. ಆ ಸ್ಥಳವನ್ನು ನೋಡಿದರೆ ಹಗಲಲ್ಲಿ ಸಹ ಯಾರೂ ಅಲ್ಲಿ ಸಂಚರಿಸುವಂತೆ ಇರಲಿಲ್ಲ.

ಕೋಸೆಟ್ಟಳು ನಡುನಡುಗುತ್ತ ಅವನನ್ನು ಒತ್ತಿ ಹಿಡಿದು ಕೊಂಡಳು. ಗಸ್ತಿನವರು ಆ ಕಲ್ ಡಿ ಸ್ಯಾಕ್ ಸ್ಥಳವನ್ನೂ ಮತ್ತು ಬೀದಿಯನ್ನೂ ಶೋಧನೆಮಾಡಿ ಹುಡುಕುತ್ತಿರುವಾಗ ಗದ್ದಲವೂ, ಕಲ್ಲುಗಳ ಮೇಲೆ ಅವರು ಹೊಡೆಯುತ್ತಿದ್ದ ಅವರ ಸಣೀನುಗಳ ಶಬ್ದವೂ, ಜೇವರ್ಟನು, ತಾನು ಅಲ್ಲಲ್ಲಿ ನಿಲ್ಲಿಸಿದ್ದ ಕಾವಲುಗಾರರನ್ನು ಕೂಗಿ ಆಕ್ಷೇಪಿಸುತ್ತಿದ್ದ ಅಸ್ಪಷ್ಟವಾದ ಮಾತುಗಳೂ ಸಹ ಇವರಿಗೆ ಕೇಳಬಂದುವು.

ಸುಮಾರು ಕಾಲು ಗಂಟೆಯ ಹೊತ್ತಿಗೆ, ಈ ಪ್ರಬಲವಾದ ಗದ್ದಲವು ದೂರದೂರಕ್ಕೆ ಹೋಗುತ್ತಿದ್ದಂತೆ ತೋರಿದುದಲ್ಲದೆ ಕಡೆಗೆ ಸದ್ದು ಅಡಗಿ ಶಾಂತಿಯು ನೆಲೆಗೊಂಡಿತು.

ಹೀಗೆ ಸಂಪೂರ್ಣ ಶಾಂತಸ್ಥಿತಿಯಿಂದ ಅಲ್ಲಿ ಎಲ್ಲವೂ ನಿಶ್ಶಬ್ದವಾಗಿರುವಾಗ ಹಠಾತ್ತಾಗಿ ಒಂದು ಹೊಸ ಧ್ವನಿಯು ಕೇಳಬಂದಿತು. ಹಿಂದೆ ಕೇಳಿದ ಧ್ವನಿಗಳು ಎಷ್ಟು ಭಯಂಕರವಾಗಿದ್ದುವೋ, ಈ ಧ್ವನಿಯು ಅಷ್ಟೂ ಅಷ್ಟು ಅನಿರ್ವಾಚ್ಯವಾದ ಆನಂದವನ್ನು ಕೊಡುವ ಸ್ವರ್ಗೀಯ ದೇವಧ್ವನಿಯಂತೆ ಇತ್ತು. ಇದು, ಆ ರಾತ್ರಿಯ ಪರಿಪೂರ್ಣ ಶಾಂತಿಸ್ಥಿತಿಯಲ್ಲಿ ಕತ್ತಲೆಯಿಂದ ಹೊರಹೊರಟ ಆಶ್ಚರ್ಯಕರವಾದ ಮತ್ತು ಮಧುರವಾದ ಪ್ರಾರ್ಥನಾ ಗೀತವು.

ಕೋಸೆಟ್ಟಳೂ ಮತ್ತು ಜೇನ್ ವಾಲ್ಜೀನನೂ ಮೊಣ

ಕಾಲೂರಿ ಕುಳಿತರು. ಈ ಧ್ವನಿಯೇನೆಂಬುದು ಅವರಿಗೆ ಗೊತ್ತಾಗ ಲಿಲ್ಲ; ತಾವೆಲ್ಲಿರುವೆವೆಂಬುದೂ ಅವರಿಗೆ ಗೋಚರವಾಗಲಿಲ್ಲ. ಆದರೂ ತನ್ನ ಅಪರಾಧಕ್ಕಾಗಿ ಪಶ್ಚಾತ್ತಾಪಕ್ಕೆ ಒಳಗಾಗಿದ್ದ ಆ ಮನುಷ್ಯನಿಗೂ ನಿರಪರಾಧಿಯಾಗಿದ್ದ ಆ ಮಗುವಿಗೂ ಸಹ ಆ ಗೀತವನ್ನು ಕೇಳಿದೊಡನೆಯೇ ಮೊಣಕಾಲೂರಿ ನಮಸ್ಕರಿಸ ಬೇಕೆಂಬ ಭಕ್ತಿಭಾವವುಂಟಾಯಿತು.

ಆ ತೋಟವು ಸಾಧುಗಳ ಮಠಕ್ಕೆ ಸೇರಿದುದಾ ಗಿತ್ತು. ಅವರು ಕೇಳಿದ ಗಾನವು ಅಲ್ಲಿನ ಯೋಗಿನಿಯರು ಹಾಡಿದ ಗೀತವು. ಸ್ವಲ್ಪ ಹೊತ್ತಿನಲ್ಲಿಯೇ ಜೀನ್ ವಾಲ್ಜೀನನಿಗೆ ಒಂದು ಸಣ್ಣ ಗಂಟೆಯ ಶಬ್ದವು ಕೇಳಿಬಂತು. ಆ ಸಮಯದಲ್ಲಿಯೇ ಆ ತೋಟದಲ್ಲಿ ಒಬ್ಬ ಮನುಷ್ಯನು ಸಂಚರಿಸುತ್ತಿದ್ದುದೂ ಕಣ್ಣಿಗೆ ಬಿತ್ತು. ಇಷ್ಟು ಹೊತ್ತಿಗೆ ಕೋಸೆಟ್ಟಳಿಗೆ ಕಳವು ಬಂದು ಬಿದ್ದುಬಿಟ್ಟಳು. ಇದರಿಂದ ಇವನು ಆ ಕ್ಷಣವೇ ಯಾರಿಂದ ಲಾದರೂ ಸಹಾಯವನ್ನು ಪಡೆಯಲೇಬೇಕಾಗಿ ಬಂತು.

ಅವನು ತನ್ನ ಒಳ ಅಂಗಿಯ ಜೇಬಿನಲ್ಲಿದ್ದ ಹಣದ ನೋಟು ಗಳ ಸುರುಳಿಯನ್ನು ಕೈಗೆ ತೆಗೆದುಕೊಂಡು ನೆಟ್ಟನೆ ಆ ಮನುಷ್ಯನ ಬಳಿಗೆ ಹೋದನು.

ಆ ಮನುಷ್ಯನು ತಲೆಯನ್ನು ಬಗ್ಗಿಸಿಕೊಂಡು ಹೋಗು ತ್ತಿದ್ದನಾದುದರಿಂದ ಇವನು ಬರುತ್ತಿದ್ದುದು ಆತನಿಗೆ ಕಾಣಲಿಲ್ಲ. ಇನ್ನೂ ಕೆಲವು ಹೆಜ್ಜೆಗಳು ಮುಂದುವರಿದು ಜೀನ್ ವಾಲ್ಜೀನನು ಆತನ ಪಕ್ಕಕ್ಕೆ ಹೋಗಿ, 'ಒಂದು ನೂರು ಫ್ರಾಂಕುಗಳು!' ಎಂದು ಕೂಗಿದನು.

ಆ ಮನುಷ್ಯನು ಬೆಚ್ಚಿ ತಲೆಯೆತ್ತಿದನು.

ಆಗ ಜೀನ್ ವಾಲ್ಜೀನನು, 'ಈ ರಾತ್ರಿ ನನಗೆ ಆಶ್ರಯವನ್ನು ಕೊಟ್ಟರೆ ನೂರು ಫ್ರಾಂಕುಗಳನ್ನು ಕೊಡುವೆನು,' ಎಂದನು.

ದಿಕ್ಕು ತೋರದೆ ನಿಂತಿದ್ದ ಜೀನ್ ವಾಲ್ಜೀನನ ಮುಖದ ಮೇಲೆ ಚೆನ್ನಾಗಿ ಬೆಳ್ದಿಂಗಳು ಬಿದ್ದಿತ್ತು.

ಆಗ ಆ ಮನುಷ್ಯನು, 'ಏನಿದು ? ಫಾದರ್ ಮೇಡಲಿನರೇ ?' ಎಂದನು.

ಹೀಗೆ, ಇಂತಹ ಹೆಸರು, ಇಂತಹ ನಿಶಿಯಲ್ಲಿ, ತನ್ನ ಕಷ್ಟ ಸ್ಥಿತಿಯಲ್ಲಿ, ಈ ಅಪರಿಚಿತ ಸ್ಥಳದಲ್ಲಿ, ಈ ಅಪರಚಿತನಿಂದ ಉಚ್ಚರಿಸಲ್ಪಟ್ಟುದನ್ನು ಕೇಳಿ, ಜೀನ್ ವಾಲ್ಜೀನನು ಬೆಚ್ಚಿ ಹಿಂಜಗ್ಗಿ, 'ಸ್ವಾಮಿ, ನೀವು ಯಾರು? ಈ ಮನೆ ಯಾವುದು?' ಎಂದು ಆತನನ್ನು ಕೇಳಿದನು.

ಆಗ ಆ ಮುದುಕನು, ಆಶ್ಚರ್ಯದಿಂದ, 'ಓಹೋ ! ಈಗ ಚೆನ್ನಾಯಿತು ! ನೀವು ಯಾರಿಗಾಗಿ ಈ ಸ್ಥಳವನ್ನು ಕೊಡಿಸಿಕೊಟ್ಟಿರೋ ಅವನೇ ನಾನು ; ಈ ಮನೆಯೂ, ನೀವು ನನಗೆ ನಿಲ್ಲುವುದಕ್ಕೆ ಮಾಡಿಕೊಟ್ಟ ಸ್ಥಳವು. ಇದೇನು? ನಿಮಗೆ ನನ್ನ ಜ್ಞಾಪಕವಿಲ್ಲವೆ ?' ಎಂದನು.

ಅದಕ್ಕೆ ಜೀನ್ ವಾಲ್ಜೀನನು, 'ಇಲ್ಲ ; ನನಗೆ ಜ್ಞಾಪಕವಿಲ್ಲ. ನಿಮಗೆ ನನ್ನ ಪರಿಚಯವಾಗಿರುವುದು ಹೇಗೆ ?' ಎಂದನು.

ಅದಕ್ಕೆ ಆ ಮನುಷ್ಯನು, 'ನೀವು ನನ್ನ ಪ್ರಾಣವನ್ನುಳಿಸಿದಿರಿ,' ಎಂದನು.

ಜೀನ್ ವಾಲ್ಜೀನನು ಪಕ್ಕಕ್ಕೆ ತಿರುಗುವಷ್ಟರಲ್ಲಿ, ಆ ಮುದುಕನ ಮುಖದ ಮೇಲೆ ಆಗ ಬೆಳ್ದಿಂಗಳು ಚೆನ್ನಾಗಿ ಬೀಳಲು, ಆತನು ಹಿಂದೆ ತಾನು ಉಳಿಸಿದ್ದ ಫಾದರ್ ಫಾಚೆಲ್‌ವೆಂಟ್ ಎಂಬಾತನೆಂದು ಅವನಿಗೆ ಗುರುತು ಸಿಕ್ಕಿತು.

ಆಗ ಜೀನ್ ವಾಲ್ಜೀನನು, 'ಓಹೋ ! ತಾವೇ? ಅಹುದು, ಈಗ ನನಗೆ ಗುರುತು ಸಿಕ್ಕಿತು,' ಎಂದನು.

ಮುದುಕನು, 'ಇದು ನನ್ನ ಅದೃಷ್ಟವೇ ಸರಿ !' ಎಂದನು.

ಜೀನ್ ವಾಲ್ಜೀನನು, ತಾನು ಮೇಡಲಿನ್ ಎಂಬ ಹೆಸರಿನಿಂದಿದ್ದಾಗಲಾದರೂ ಈತನಿಗೆ ತನ್ನ ಪರಿಚಯವಿದ್ದಿತೆಂಬ ಕಾರಣದಿಂದ ಇನ್ನು ಹೆಚ್ಚಾದ ಜಾಗರೂಕತೆ ಅವನಿಗೆ ಬೇಕಾಗಲಿಲ್ಲ. ಅನೇಕ ಪ್ರಶ್ನೋತ್ತರಗಳು ನಡೆದುವು. ಕೂಡಲೆ ಅವರಿಬ್ಬರ ಸ್ಥಿತಿಗಳೂ ಮೊದಲಿದ್ದುದಕ್ಕೆ ವಿರೋಧವಾಗಿ, ಒಬ್ಬರ ಸ್ಥಿತಿಯು

ಮತ್ತೊಬ್ಬರಿಗೆ ಬಂದಿತ್ತು. ಜೀನ್ ವಾಲ್ಜಿನನೇ ಅನೇಕ ಪ್ರಶ್ನೆಗಳನ್ನು ಹಾಕತೊಡಗಿದನು.

'ನಿಮ್ಮ ಮೊಣಕಾಲಿಗೆ ಘಂಟೆ ಕಟ್ಟಿರುವುದು ಏತಕ್ಕೆ?' ಎಂದನು.

ಅದಕ್ಕೆ ಫಾಚೆಲ್‌ವೆಂಟನು, 'ಅದೋ? ಅದು, ಅವರು ನನ್ನ ಬಳಿಗೆ ಬಾರದೆ ದೂರವಾಗಿರಬೇಕೆಂದು ಕಟ್ಟಿಕೊಂಡಿರುವುದು,' ಎಂದನು.

'ಏನು? ನಿಮ್ಮ ಬಳಿಗೆ ಬಾರದೆ ದೂರವಾಗಿರುವುದೇ? ಅದು ಹೇಗೆ?' ಎಂದು ಜೀನ್ ವಾಲ್ಜೀನನು ಕೇಳಿದಾಗ ಮುದಿ ಫಾಚೆಲ್‌ವೆಂಟನು ವಿಚಿತ್ರ ರೀತಿಯಿಂದ ಕಣ್ಣು ಮಿಟುಕಿಸಿ, 'ಅಯ್ಯೋ! ಏನೆಂದು ಹೇಳಲಿ; ಈ ಮನೆಯಲ್ಲಿ ಸ್ತ್ರೀಯರಲ್ಲದೆ ಬೇರೆ ಯಾರೂ ಇಲ್ಲ. ಅವರು ನನ್ನನ್ನು ಸಂಧಿಸುವುದು ಬಹಳ ಅಪಾಯಕರವಂತೆ! ಈ ಘಂಟೆಯ ಶಬ್ದವು ಅವರಿಗೆ ಎಚ್ಚರಿಕೆಯನ್ನು ಕೊಡುವುದು. ಇದರಿಂದ ನಾನು ಬಂದೊಡನೆಯೇ ಅವರು ಮರೆಯಾಗುವರು,' ಎಂದು ಹೇಳಿದನು.

ಅನಂತರ ಜೀನ್ ವಾಲ್ಜೀನನು, 'ಈ ಮನೆ ಯಾವುದು?' ಎಂದು ಕೇಳಿದುದಕ್ಕೆ, ಮುದುಕನು, 'ಈ ಮನೆಯು ಪೆಟಿಟ್ ಪಿಕ್ಪಸ್ ಎಂಬವರ ಮಠವು,' ಎಂದನು.

ಜೀನ್ ವಾಲ್ಜೀನನು ಮತ್ತಷ್ಟು ಸಮೀಪಕ್ಕೆ ಹೋಗಿ ಮುದುಕನನ್ನು ಕುರಿತು ಗಂಭೀರ ಸ್ವರದಿಂದ, 'ಫಾದರ್ ಫಾಚೆಲ್‌ವೆಂಟರವರೇ, ನಾನು ನಿಮ್ಮ ಪ್ರಾಣವನ್ನುಳಿಸಿದೆನು,' ಎಂದನು.

ಫಾಚೆಲ್‌ವೆಂಟ್ -- ಆ ವಿಷಯವನ್ನು ಮೊದಲು ಜ್ಞಾಪಕಕ್ಕೆ ತಂದವನು ನಾನೇ ಅಲ್ಲವೇ?

ಜೀನ್ ವಾಲ್ಜೀನ್ — ಬಹಳ ಸಂತೋಷ; ಈಗ ನಾನು ಎರಡು ವಿಷಯಗಳನ್ನು ಕೇಳಿಕೊಳ್ಳುತ್ತೇನೆ.

ಫಾಚೆಲ್‌ವೆಂಟ್ — ಅಂತಹ ವಿಷಯಗಳು ಯಾವವು, ಮಾನ್‌ಸಿಯುರ್ ಮೇಡಲಿನ್‌ರವರೇ?

ಜೀನ್ ವಾಲ್ಜೀನ್—ಮೊದಲನೆಯದು, ನಿಮಗೆ ನನ್ನ ವಿಚಾರವಾಗಿ ಗೊತ್ತಿರುವ ವಿಷಯುಗಳನ್ನು ಯಾರೊಡನೆಯೂ ಹೇಳಲಾಗದೆಂಬುದು; ಎರಡನೆಯದು, ಇನ್ನು ಹೆಚ್ಚಾಗಿ ನನ್ನ ಕಥೆಯನ್ನು ನೀವು ಕೇಳಿ ತಿಳಿದುಕೊಳ್ಳುವುದಕ್ಕೆ ಪ್ರಯತ್ನಿಸದಿರಬೇಕೆಂಬುದು.

ಫಾಚೆಲ್‌ವೆಂಟ್—ನಿಮ್ಮ ಇಷ್ಟದಂತೆ ಆಗಲಿ. ನೀವು ಅವಮಾನಕರವಾದ ಕಾರ್ಯವನ್ನು ಮಾಡಲಾರಿರೆಂಬುದನ್ನೂ, ನೀವು ಯಾವಾಗಲೂ ದೈವಪ್ರಿಯರಾದ ಸತ್ಪುರುಷರೆಂಬುದನ್ನೂ ನಾನು ಬಲ್ಲೆನು. ಇಷ್ಟೇ ಅಲ್ಲದೆ, ನನ್ನನ್ನು ತೋಟಗಾರನನ್ನಾಗಿ ಇಲ್ಲಿಗೆ ತಂದಿರಿಸಿದವರೇ ನೀವು. ಈ ಸ್ಥಳವೂ ನಿಮ್ಮದು; ನಾನೂ ನಿಮ್ಮವನು.

ಜೀನ್ ವಾಲ್ಜೀನ್—ಬಹಳ ಸಂತೋಷ. ಇನ್ನು ನನ್ನೊಡನೆ ಬನ್ನಿ. ಮಗುವನ್ನು ಎತ್ತಿಕೊಂಡು ಬರೋಣ.

ಫಾಚೆಲ್‌ವೆಂಟ್—ಓಹೋ! ಮಗುವು ಬೇರೆ ಇದೆಯೇನು?

ಎನ್ನುತ್ತ ಪ್ರತಿವಾಕ್ಯನ್ನಾಡದೆ, ಪರಮ ವಿಧೇಯನಾಗಿ ಜೀನ್ ವಾಲ್ಜೀನನನ್ನು ಹಿಂಬಾಲಿಸಿ ಹೊರಟನು.

ಅರ್ಧ ಗಂಟೆಯೊಳಗಾಗಿ, ಕೋಸೆಟ್ಟಳು ಆರೋಗ್ಯ ಹೊಂದಿ ಬೆಂಕಿಯ ಮುಂಗಡೆಯಲ್ಲಿ ಹಾಸಿದ್ದ ಆ ತೋಟಗಾರನ ಹಾಸುಗೆಯ ಮೇಲೆ ಮಲಗಿ ನಿದ್ದೆ ಹೋದಳು. ಆ ಇಬ್ಬರೂ ಒಂದು ಮೇಜಿನ ಮೇಲೆ ಮೊಣಕೈಗಳನ್ನೂರಿ ಕುಳಿತು ಬೆಂಕಿಯನ್ನು ಕಾಯಿಸಿಕೊಳ್ಳುತ್ತಿದ್ದರು. ಆ ಮೇಜಿನ ಮೇಲೆ ಫಾಚೆಲ್‌ವೆಂಟನು ಸ್ವಲ್ಪ ಹಾಲುಗಿಣ್ಣನ್ನೂ, ರೊಟ್ಟಿಯನ್ನೂ, ಒಂದು ಸೀಸೆಯಲ್ಲಿ ಮಧುವನ್ನೂ (wine) ಎರಡು ಗಾಜಿನ ಲೋಟಗಳನ್ನೂ ಇಟ್ಟಿದ್ದನು. ಮುದುಕನು ಜೀನ್ ವಾಲ್ಜೀನನ ಮೊಣಕಾಲ ಮೇಲೆ ಕೈಯನ್ನಿಟ್ಟು, 'ಸ್ವಾಮಿ, ಫಾದರ್ ಮೇಡಲಿನರವರೇ, ಮೊದಲು ನಿಮಗೆ ನನ್ನ ಗುರುತು ಸಿಕ್ಕಲಿಲ್ಲವೇ? ನೀವು ಜನರ ಪ್ರಾಣವನ್ನುಳಿಸಿ ಅನಂತರ ಅವರನ್ನು ಮರೆತುಬಿಡಬಹುದೇ? ಇದು ಸರಿಯಲ್ಲ. ಅವರು ನಿಮ್ಮನ್ನು ನೆನಪಿಸಲ್ಲಿಟ್ಟಿರುತ್ತಾರೆ. ನೀವೇ ಕೃತಜ್ಞರಲ್ಲ,' ಎಂದನು.

ಕೋಸೆಟ್ಟಳೊಡನೆ ತಾನು ನಗರಕ್ಕೆ ಹಿಂದಿರುಗಿದರೆ ತಮ್ಮಿಬ್ಬರ ಪ್ರಾಣವೂ ಉಳಿಯುವುದಿಲ್ಲವೆಂದು ಜೀನ್ ವಾಲ್ಜೀನನು ನಿರ್ಧರಮಾಡಿಕೊಂಡನು. ಆ ಮಠವು ಅವರಿಗೆ ಏಕಕಾಲದಲ್ಲಿ ಅತ್ಯಂತ ಸುಖದಾಯಕವಾಗಿಯೂ ಅಪಾಯಕರವಾಗಿಯೂ ಸಹ ಇದ್ದಿತು. ಅಲ್ಲಿ ಅವನ ಸ್ಥಿತಿಯು ವ್ಯಕ್ತಪಡುವುದಾದರೆ ಅವನನ್ನು ಆ ಕ್ಷಣವೇ ಗ್ರಾಮರಕ್ಷಕರ (Police) ವಶಕ್ಕೆ ಒಪ್ಪಿಸಿಬಿಡುತ್ತಿದ್ದರು ; ಇದರಿಂದ ಈ ಸ್ಥಳವು ಕೇವಲ ಅಪಾಯಕರವಾಗಿತ್ತು ; ಒಂದು ವೇಳೆ ಅಲ್ಲಿ ನಿಲ್ಲುವುದಕ್ಕೆ ಅವನಿಗೆ ಅಪ್ಪಣೆ ದೊರೆಯುವುದಾಗಿದ್ದರೆ ಅದು ಅತ್ಯಂತ ನಿರಪಾಯ ಸ್ಥಳವಾಗಿತ್ತು.

ಫಾಚೆಲ್‌ವೆಂಟನು ಜೀನ್ ವಾಲ್ಜೀನನನ್ನು ಕುರಿತು, 'ನೀವು ಇಲ್ಲಿ ಯಾರೂ ನಿಮ್ಮಾಗಮನವನ್ನು ಗಮನಿಸಲಾರದಂತಹ ಸುಸಮಯದಲ್ಲಿಯೇ ಬಂದಿರಿ; ಏತಕ್ಕೆಂದರೆ, ಇಲ್ಲಿರತಕ್ಕವರಲ್ಲಿ ಒಬ್ಬ ಯೋಗಿನಿಯು ಮರಣಾವಸ್ಥೆಯಲ್ಲಿರುವಳು ; ಎಲ್ಲರೂ ಆಕೆಯ ಬಳಿಯಲ್ಲಿರುವರು. ಆದರೆ ಅವರಿಗೆ ನೀವು ಇಲ್ಲಿಗೆ ಹೇಗೆ ಬಂದಿರೆಂಬುದನ್ನು ವಿವರಿಸಿ ಹೇಳಿದಲ್ಲದೆ ನಿಮಗೆ ಇಲ್ಲಿ ನಿಲ್ಲಲು ಸಾಧ್ಯವೇ ಆಗಲಾರದು ; ಆದುದರಿಂದ ನೀವೂ ಕೋಸೆಟ್ಟಳೂ ಸಹ ಮತ್ತೆ ಹೊರಕ್ಕೆ ಹೊರಟುಹೋಗಿ ಸರಿಯಾದ ಬಾಗಿಲಿನಿಂದ ಒಳಗೆ ಬರಬೇಕಾಗಿದೆ. ಕೋಸೆಟ್ಟಳು ಹೊರಗೆ ಹೋಗುವುದು ಮಾತ್ರ ಸುಲಭವು. ನನ್ನ ಕೊಠಡಿಯ ಬಾಗಿಲನ್ನು ತೆರೆದರೆ ಅಂಗಳದೊಳಕ್ಕೆ ಹೋಗಬಹುದು. ನಾನು ತಟ್ಟಿದರೆ ಬಾಗಿಲು ಕಾಯುವವನು ಕದವನ್ನು ತೆಗೆಯುವನು ; ಆ ಮಗುವನ್ನು ಬುಟ್ಟಿಯಲ್ಲಿಟ್ಟುಕೊಂಡು ಬೆನ್ನಿನಮೇಲೆ ಬುಟ್ಟಿಯನ್ನು ಹೊತ್ತುಕೊಂಡು ಹೊರಗೆ ಹೋಗುವೆನು. ಫಾದರ್ ಫಾಚೆಲ್‌ವೆಂಟನು ಮಾತ್ರ ಬುಟ್ಟಿಯನ್ನು ಹೊತ್ತು ಹೊರಗೆ ಹೋದಂತೆ ಕಾಣುವುದು ; ಇಷ್ಟೆ! ಉಪಾಯವು ಸುಲಭವಾಗಿರುವುದು. ಆದರೆ ನಿಶ್ಶಬ್ದವಾಗಿರುವಂತೆ ಮಗು

ಏಗೆ ನೀವು ಹೇಳಬೇಕು. ಅವಳನ್ನು ನಾನು ಮುಸುಕಿನೊಳಗೆ ಬಚ್ಚಿಡುವೆನು. ಸಾಧ್ಯವಾದಷ್ಟು ಜಾಗ್ರತೆಯಾಗಿ ನಾನು ಅವಳನ್ನು ರೂ ಡೂ ಚೆಮಿನ್ ವರ್ಟ್ ಎಂಬ ಬೀದಿಯಲ್ಲಿರುವ ನನ್ನ ಹಳೆಯ ಸ್ನೇಹಿತಳಾದ ಹಣ್ಣು ಮಾರುವ ಕಿವುಡು ಹೆಂಗಸಿನ ಬಳಿಗೆ ಕರೆದುಕೊಂಡು ಹೋಗಿ ಹಾಸುಗೆಯಲ್ಲಿ ಮಲಗಿಸುವೆನು. ಅನಂತರ ಈ ಮಗುವು ನನ್ನ ತಮ್ಮನ ಮಗಳೆಂತಲೂ, ನಾಳೆಯ ವರೆಗೂ ಇವಳನ್ನು ಎಚ್ಚರಿಕೆಯಿಂದ ಕಾಪಾಡಿಕೊಂಡಿರಬೇಕೆಂತಲೂ ಅವಳ ಕಿವಿಯಲ್ಲಿ ಗಟ್ಟಿಯಾಗಿ ಅರಚುವೆನು. ನಾನು ನಾಳೆಯ ದಿನ ನಿಮ್ಮನ್ನು ಇಲ್ಲಿಗೆ ಕರೆತರುವಾಗ ಹುಡುಗಿಯೂ ನಿಮ್ಮೊಡನೆ ಬರುವಳು. ಇದೇ ಉಪಾಯ. ಆದರೆ ನೀವು ಹೊರಗೆ ಹೋಗಲು ಯಾವ ಉಪಾಯವನ್ನು ಮಾಡುವಿರಿ?' ಎಂದನು.

ಜೀನ್ ವಾಲ್ಜೀನನು ತಲೆಯನ್ನಲ್ಲಾಡಿಸಿ, 'ಫಾದರ್ ಫಾಚೆಲ್ ವೆಂಟರೇ, ನನ್ನನ್ನು ಯಾರೂ ನೋಡದಿದ್ದರೆ ಸರಿ. ಕೋಸೆಟ್ಟಳನ್ನು ಬುಟ್ಟಿಯಲ್ಲಿ ಮುಚ್ಚಿ ಹೊರಗೆ ಕರೆದುಕೊಂಡು ಹೋಗುವಂತೆಯೇ ನನ್ನನ್ನೂ ಕರೆದುಕೊಂಡು ಹೋಗಲು ಏನಾದರೂ ಒಂದು ಉಪಾಯವನ್ನು ನೀವೇ ಆಲೋಚಿಸಿ ಹೇಳಿ,' ಎಂದನು.

ಆ ಸಮಯಕ್ಕೆ ಒಂದು ಘಂಟೆಯ ಶಬ್ದವು ಕೇಳಿಸಿತು. ಫಾಚೆಲ್ ವೆಂಟನು, 'ಅದೋ ನನಗಾಗಿಯೇ ಆ ಘಂಟೆಯ ಶಬ್ದವು. ಮಠದ ಯಜಮಾನಿಯು ನನ್ನನ್ನು ಕರೆಯುವಳು,' ಎಂದು ಅವಸರದಿಂದ ಹೊರಟುಹೋದನು.

ನಡುಮನೆಯಲ್ಲಿ ಯಜಮಾನಿಯೊಬ್ಬಳು ಮಾತ್ರವೇ ಕುಳಿತು ಫಾಚೆಲ್ ವೆಂಟನ ನಿರೀಕ್ಷಣೆಯಲ್ಲಿದ್ದಳು. ಅವನು ಬಂದೊಡನೆ ತಲೆಯೆತ್ತಿ, 'ನಿನ್ನೊಡನೆ ಸ್ವಲ್ಪ ಮಾತನಾಡಬೇಕಾಗಿದೆ,' ಎಂದಳು.

ಫಾಚೆಲ್ ವೆಂಟನಿಗೆ ಬಹಳ ಭಯವಾದರೂ, ಧೈರ್ಯವನ್ನು ತಂದುಕೊಂಡು, 'ಪೂಜ್ಯರಾದ ತಾಯಿಯವರೇ, ನಾನೂ ಸಹ ತಮ್ಮ ಸನ್ನಿಧಿಯಲ್ಲಿ ವಿಜ್ಞಾಪಿಸಿಕೊಳ್ಳಬೇಕಾದ ಒಂದು ವಿಷಯ ವಿರುವುದು,' ಎಂದನು.



'ನಿನ್ನೊಡನೆ ಸ್ವಲ್ಪ ಮಾತನಾಡಬೇಕಾಗಿದೆ,' ಎಂದಳು

'ಯಜಮಾನಿಯು ಅವನನ್ನು ದೃಷ್ಟಿಸಿ ನೋಡಿ, 'ಏನು? ಏನಾದರೂ ವರ್ತಮಾನವನ್ನು ತಂದಿರುವೆಯೋ?' ಎಂದು ಕೇಳಿದಳು.

ಫಾಚೆಲ್‌ವೆಂಟ್—ಒಂದು ಪ್ರಾರ್ಥನೆಯುಂಟು.

ಯಜಮಾನಿ—ಒಳ್ಳೆಯದು; ಏನದು?

ಫಾಚೆಲ್‌ವೆಂಟನು, ತನಗೆ ವಯಸ್ಸಾಗುತ್ತ ಬಂದುದರಿಂದ ತೋಟಗ ಕೆಲಸಕ್ಕೆ ತನ್ನ ಸಹಾಯಕ್ಕಾಗಿ ಮತ್ತೆ ಒಬ್ಬ ಮನುಷ್ಯನು ಬೇಕಾಗಿದೆಯೆಂತಲೂ, ಇದಕ್ಕಾಗಿ ತನ್ನ ತಮ್ಮನನ್ನು ಕರೆತಂದಿಟ್ಟುಕೊಂಡು ಅವನ ಮಗಳನ್ನು ಮಠದ ವಿದ್ಯಾರ್ಥಿನಿಯಾಗಿ ಸೇರಿಸಿಕೊಳ್ಳಲು ಅಪ್ಪಣೆಯಾಗಬೇಕೆಂತಲೂ ಕೇಳಿದನು.

ಅವನ ಮಾತೆಲ್ಲವೂ ಪೂರೈಸಿದ ಮೇಲೆ ಯಜಮಾನಿಯು, 'ಎಲೈ, ಬೆಳಗಾಗುವುದರೊಳಗಾಗಿ ಒಂದು ಬಲವಾದ ಕಬ್ಬಿಣದ ಗಡಾರಿಯನ್ನು ತಂದು ಒದಗಿಸಿ ಕೊಡಬಲ್ಲೆಯಾ?' ಎಂದು ಕೇಳಿದಳು.

ಫಾಚೆಲ್‌ವೆಂಟ್—ಏತಕ್ಕಾಗಿ ತಾಯಿಾ?

ಯಜಮಾನಿ—ಒಂದು ಕೆಲಸಕ್ಕೆ ಸನ್ನೆಯಾಗಿ ಉಪಯೋಗಿಸುವುದಕ್ಕಾಗಿ.

ಫಾಚೆಲ್‌ವೆಂಟ್—ತರುವೆನು, ತಾಯಿಾ.

ಯಜಮಾನಿಯು ಮರು ಮಾತನಾಡದೆ ಎದ್ದು, ಯೋಗಿನಿಯರಿದ್ದ ಕೊಠಡಿಗೆ ಹೋಗಿ ಮತ್ತೆ ಬಂದು ಕೆಲಸಗಾರನನ್ನು ಕುರಿತು, 'ಈಗ ತಾನೇ ಮೃತಳಾದ ಯೋಗಿನಿಯು ತಾನು ಕಳೆದ ಇಪ್ಪತ್ತು ವರ್ಷಗಳಿಂದಲೂ ರಾತ್ರಿಯ ಕಾಲದಲ್ಲಿ ಮಲಗುತ್ತಿದ್ದ ಮರದ ತೊಟ್ಟಿಲಿನಲ್ಲಿಯೇ ತನ್ನ ದೇಹವನ್ನಿಟ್ಟು ಹೂಳಬೇಕೆಂದು, ತನ್ನ ಕಡೆಯ ಅಭಿಲಾಷೆಯನ್ನು ತಿಳಿಸಿರುವಳು. ಆದುದರಿಂದ ಈ ರೀತಿಯಾಗಿ ಆಕೆಯನ್ನು ಈ ರಾತ್ರಿಯೇ ಹೂಳುವುದಕ್ಕೆ ನಿನ್ನಿಂದಾಗುವುದೇ? ಇದು ಗ್ರಾಮಾಧಿಕಾರಿಗಳ (Police) ಕಾಯಿದೆಗಳಿಗೆ ವಿರೋಧವಾದ ವಿಷಯವಾದುದರಿಂದ ಎಲ್ಲವೂ

ಬಹಳ ಗೋಪ್ಯವಾಗಿ ನಡೆಯಬೇಕು,' ಎಂದು ಹೇಳಲು, ಫಾಚೆಲ್‌ವೆಂಟನು ಅದರಂತೆ ಮಾಡಲು ಒಪ್ಪಿ, 'ತಾಯಿಾ, ನಾನು ಮಠಕ್ಕೆ ನನ್ನ ದೇಹವನ್ನೇ ಒಪ್ಪಿಸಿರುವ ಸೇವಕನು. ತಮ್ಮಪ್ಪಣೆಯಂತೆಯೇ ನಡೆಯುವೆನು,' ಎಂದನು.

ಮಾರನೆಯ ದಿನ ಶವ ವಾಹಕ ಸಂಘದಿಂದ ಬರುವ ಶವದ ಪೆಟ್ಟಿಗೆಯನ್ನೇನು ಮಾಡಬೇಕೆಂಬ ಪ್ರಶ್ನೆ ಹುಟ್ಟಿತು. ಫಾಚೆಲ್‌ವೆಂಟನು, ಅದರಲ್ಲಿ ಮಣ್ಣನ್ನು ತುಂಬಿ ಮುಚ್ಚಳಕ್ಕೆ ಮೊಳೆಗಳನ್ನು ಬಡಿದು ಸ್ಮಶಾನಕ್ಕೆ ಹೂಳಲು ತೆಗೆದುಕೊಂಡು ಹೋಗುವುದಾಗಿ ಹೇಳಿದನು. ಹೀಗೆಂದು ಹೇಳಿ ಅವನು ಹೊರಡುವಾಗ ಯಜಮಾನಿಯು ಅವನನ್ನು ಕರೆದು, 'ನಿನ್ನ ವಿಷಯದಲ್ಲಿ ನನಗೆ ಸಂಪೂರ್ಣ ತೃಪ್ತಿಸಂತೋಷಗಳುಂಟಾಗಿವೆ. ನಾಳೆಯ ದಿನ ಶವವನ್ನು ಹೂತು ಬಂದ ನಂತರ ನಿನ್ನ ತಮ್ಮನನ್ನು ಒಳಗೆ ಕರೆದುಕೊಂಡು ಬಾ. ಹಾಗೆಯೇ ಆತನ ಮಗಳನ್ನೂ ಕರೆತರುವಂತೆ ಹೇಳು,' ಎಂದಳು.

ಫಾಚೆಲ್‌ವೆಂಟನು, ಈ ಸಂಭಾಷಣೆಯ ವಿಷಯವನ್ನು ತಿಳಿಸಲು ಮತ್ತೆ ಜೀನ್ ವಾಲ್ಜೀನನ ಬಳಿಗೆ ಹೋಗಿ, ಎಲ್ಲವನ್ನೂ ಹೇಳಿ, 'ಕಡೆಗೆ ಒಂದು ಕಷ್ಟವಿದೆ; ಪೆಟ್ಟಿಗೆಯು ಶವವಿಲ್ಲದೆ ಬರಿಯದಾಗಿರುವುದು!' ಎಂದನು.

ಜೀನ್ ವಾಲ್ಜೀನನಿಗೆ ಇದು ಅರ್ಥವಾಗದಿರಲು, ವಿಷಯವನ್ನು ವಿವರಿಸಿ ಹೇಳಬೇಕೆಂದು ಕೇಳಿದನು.

ಫಾಚೆಲ್‌ವೆಂಟ್—ಒಬ್ಬ ಯೋಗಿನಿಯು ಮೃತಳಾಗಿದ್ದಾಳೆ. ಪೌರಸಂಘದ ವೈದ್ಯನು, (The Municipality Physician) ಯೋಗಿನಿಯು ಸತ್ತಿರುವಳೆಂದು ತಿಳಿಸಿದೊಡನೆಯೇ ಸರ್ಕಾರದವರು ಒಂದು ಶವದ ಪೆಟ್ಟಿಗೆಯನ್ನು ಕಳುಹಿಸಿಕೊಡುವರು. ನಾಳೆಯ ದಿನ ಆ ಶವಸಹಿತವಾದ ಪೆಟ್ಟಿಗೆಯನ್ನು ಸ್ಮಶಾನಕ್ಕೆ ತೆಗೆದುಕೊಂಡು ಹೋಗಲು ಒಂದು ಬಂಡಿಯನ್ನೂ, ಕೆಲವರು ಶವವಾಹಕರನ್ನೂ ಕಳುಹಿಸಿಕೊಡುವರು. ಆ ಶವವಾಹಕರು ಬಂದು

ಶವದ ಪೆಟ್ಟಿಗೆಯನ್ನೆತ್ತಿಕೊಂಡಾಗ ಅದು ಬರಿಯದಾಗಿರುವುದು.

ಜೀನ್ ವಾಲ್ಜೀನ್—ಅದರಲ್ಲಿ ಯಾರನ್ನಾದರೂ ಮಲಗಿಸಿದರೆ ಆಯಿತು.

ಫಾಚೆಲ್‌ವೆಂಟ್—ಶವವನ್ನಿಡಬೇಕಲ್ಲಾ! ಎಲ್ಲಿದೆ?

ಜೀನ್ ವಾಲ್ಜೀನ್—ಇಲ್ಲ, ಶವವಿಲ್ಲ.

ಫಾಚೆಲ್‌ವೆಂಟ್—ಮತ್ತೆ ಮಾಡುವುದೇನು?

ಜೀನ್ ವಾಲ್ಜೀನ್—ಬದುಕಿರುವವರನ್ನೇ ಶವದಂತೆ ಮಲಗಿಸಿದರಾಯಿತು.

ಫಾಚೆಲ್‌ವೆಂಟ್—ಬದುಕಿರುವ ಯಾರನ್ನು?

ಜೀನ್ ವಾಲ್ಜೀನ್—ನನ್ನನ್ನು.

ಕೇಳುತ್ತಿದ್ದ ಫಾಚೆಲ್‌ವೆಂಟನು ಪಟಾಸಿನ ಶಬ್ದಕ್ಕೆ ಬೆಚ್ಚಿಬೀಳುವಂತೆ ಎದ್ದು, 'ಏನು? ನಿಮ್ಮನ್ನೇ?' ಎಂದನು.

ಜೀನ್ ವಾಲ್ಜೀನ್—ಏತಕ್ಕಾಗಬಾರದು?

ಎಂದು ಜೀನ್ ವಾಲ್ಜೀನನು ತನಗೆ ಸ್ವಭಾವಜನ್ಯವಾಗಿದ್ದ ವಿಚಿತ್ರವಾದ ಮುಗುಳ್ನಗೆ ನಕ್ಕನು.

ಫಾಚೆಲ್‌ವೆಂಟ್—ಅಯ್ಯೋ! ಚೆನ್ನಾಯಿತು! ನಗುತ್ತಿರುವಿರಲ್ಲಾ! ನೀವು ಇದನ್ನು ಯಥಾರ್ಥವಾದ ಪ್ರಬಲ ವಿಷಯವೆಂದು ತಿಳಿದು ಮಾತನಾಡುತ್ತಿಲ್ಲ.

ಜೀನ್ ವಾಲ್ಜೀನ್—ನಿಜವಾಗಿಯೂ ಪ್ರಬಲ ವಿಷಯವೆಂದೇ ಮಾತನಾಡುತ್ತಿರುವೆನು. ನಾನು ಹೊರಕ್ಕೆ ಹೊರಟು ಹೋಗಬೇಕು. ನಾಳೆಯ ದಿನ ಶವದ ಪೆಟ್ಟಿಗೆಯು ಬಂದ ಮೇಲೆ ಬಂಡಿಯು ಎಷ್ಟು ಹೊತ್ತಿಗೆ ಬರುವುದು.

ಫಾಚೆಲ್‌ವೆಂಟ್—ಮಧ್ಯಾಹ್ನದ ಮೇಲೆ ಸುಮಾರು ೩ ಗಂಟೆಗೆ ಬರುವುದು.

ವಾಗಿರಾರ್ಡ್ ಸ್ಮಶಾನದಲ್ಲಿ ಕತ್ತಲಾಗುವುದಕ್ಕೆ ಸ್ವಲ್ಪ ಮುಂಚಿತವಾಗಿ ಶವಸಂಸ್ಕಾರವು ನಡೆಯುವುದು. ಅದು ನವಿೂಪವಲ್ಲ.

ಜೀನ್ ವಾಲ್ಜೀನ್—ನಾನು ಈ ರಾತ್ರಿ ಮತ್ತು ನಾಳೆ ಹಗಲೆಲ್ಲವೂ ನಿಮ್ಮ ಆಯುಧಗಳ ಕೊಠಡಿಯಲ್ಲಿ ಅಡಗಿಕೊಂಡಿರುವೆನು. ನೀವು ಎರಡು ಗಂಟೆಗೆ ಬಂದು ನನ್ನನ್ನು ಪೆಟ್ಟಿಗೆಯಲ್ಲಿ ಮುಚ್ಚಿ ಅದಕ್ಕೆ ಮೊಳೆಗಳನ್ನು ಬಡಿಯಿರಿ.

ಫಾಚೆಲ್‌ವೆಂಟನು ಗಾಬರಿಪಟ್ಟು ಬೆಚ್ಚಿ, ಕೈ ಬೆರಳುಗಳಲ್ಲಿ ನೆಟ್ಟಿಗೆ ಮುರಿಯುತ್ತ, 'ಇದು ಅಸಾಧ್ಯ,' ಎಂದನು.

ಜೀನ್ ವಾಲ್ಜೀನ್—ಛೇ? ಸುತ್ತಿಗೆಯಿಂದ ಹಲಗೆಯೊಳಕ್ಕೆ ಮೊಳೆಗಳನ್ನು ಬಡಿಯುವುದು ಅಸಾಧ್ಯವೆ?

ಫಾಚೆಲ್‌ವೆಂಟ್—(ಸ್ವಲ್ಪ ಆಲೋಚಿಸಿ) ಆದರೆ ನೀವು ಉಸಿರಾಡಿಸಲೇನು ಮಾಡುವಿರಿ?

ಜೀನ್ ವಾಲ್ಜೀನ್—ಉಸಿರನ್ನಾಡಿಸುವೆನು.

ಫಾಚೆಲ್‌ವೆಂಟ್—ಏನು? ಪೆಟ್ಟಿಗೆಯಲ್ಲಿಯೇ? ಅದನ್ನು ಸ್ಮರಿಸಿಕೊಂಡ ಮಾತ್ರಕ್ಕೇ ನನಗೆ ಉಸಿರು ಸಿಕ್ಕಿಕೊಂಡಂತಾಗುವುದು.

ಜೀನ್ ವಾಲ್ಜೀನ್—ನಿಮ್ಮಲ್ಲಿ ಬೈರಿಗೆ ಇದೆಯಷ್ಟೆ! ಆ ಪೆಟ್ಟಿಗೆಯ ಮುಚ್ಚಳದ ಸಮೀಪದಲ್ಲಿ ಅಲ್ಲಲ್ಲಿ ಕೆಲವು ಚಿಕ್ಕಚಿಕ್ಕ ರಂಧ್ರಗಳನ್ನು ಮಾಡುವುದಲ್ಲದೆ ಮೇಲಣ ಹಲಗೆಯನ್ನು ಬಿಗಿಯಾಗಿಡದೆ ಸಡಿಲವಾಗಿ ಮೊಳೆಗಳನ್ನು ಬಡೆದರಾಯಿತು. ಆ ಸ್ಮಶಾನದಲ್ಲಿ ಏನು ಮಾಡುವರೆಂಬುದೊಂದೇ ನನಗನುಮಾನ! ಅದನ್ನು ತಿಳಿಯುವ ಕುತೂಹಲವೇ ನನಗೆ ಅಧಿಕವಾಗಿರುವುದು.

ಫಾಚೆಲ್‌ವೆಂಟ್—ಈ ವಿಷಯದಲ್ಲಿ ನನ್ನ ಮನಸ್ಸಿಗೇನೂ ಗಾಬರಿಯಿಲ್ಲ. ನೀವು ಪೆಟ್ಟಿಗೆಯಿಂದೀಚೆಗೆ ಬರುವುದು ದೃಢವಾದರೆ ನಿಮ್ಮನ್ನು ನಾನು ಸಮಾಧಿಯಿಂದೀಚೆಗೆ ಸಂದೇಹವಿಲ್ಲದೆ ತೆಗೆಯುವೆನು. ಆ ಸಮಾಧಿಯ ಗುಣಿಯನ್ನಗೆಯುವ ಆಳು ಕುಡುಕನು ಮತ್ತು ನನಗೆ ಬೇಕಾದವನು. ಅವನ ಹೆಸರು ಫಾದರ್ ಮೆಸ್ತೀನ್ ಎಂದು. ಅವನು ಸಾರಾಯಿ ಕುಡಿಯುವುದರಲ್ಲಿ ನಿಸ್ಸೀಮನಾದ ಮುದುಕನು. ಅವನನ್ನು ನಾನು ಸುಲಭವಾಗಿ ದಾರಿಗೆ ತರಬಲ್ಲೆನು.

ಜೀನ್ ವಾಲ್ಜೀನನು ಕೈ ಚಾಚಲು, ಫಾಚೆಲ್‌ವೆಂಟನು ಉಕ್ಕಿ ಬಂದ ಕೇವಲ ನಿಷ್ಕಲ್ಮಷವಾದ ಭಕ್ತಿಯಿಂದ ಪರವಶನಾಗಿ ಅದರ ಮೇಲೆ ಬಿದ್ದನು.

ಜೀನ್ ವಾಲ್ಜೀನ್—ಫಾದರ್ ಫಾಚೆಲ್‌ವೆಂಟರೇ, ಎಲ್ಲವೂ ತೀರ್ಮಾನವಾಯಿತು. ಇನ್ನು ಎಲ್ಲವೂ ಸುಮುಖವಾಗಿ ನೆರವೇರುವುದು.

ಫಾಚೆಲ್‌ವೆಂಟನು ತನ್ನಲ್ಲಿ ತಾನು, 'ಸದ್ಯಕ್ಕೆ ಅಪಾಯವೇನೂ ಇಲ್ಲದೆ ಎಲ್ಲವೂ ಅನುಕೂಲವಾಗಿಯೇ ನಡೆದರೆ ಸಾಕು. ಇದೆಂತಹ ಭಯಂಕರ ಕಾರ್ಯ!' ಎಂದುಕೊಂಡನು.

---

# ೯

ಮೂರನೆಯ ದಿನ ಸೂರ್ಯಾಸ್ತಮಯ ಸಮಯದಲ್ಲಿ, ಬೌಲೆವಾರ್ಡ್ ಮೆಯಿನ್ ಬೀದಿಯಲ್ಲಿ ಹಾದುಹೋಗುತ್ತಿದ್ದ ಜನರು, ಹಿಂದಣ ಕಾಲದ ಶವರಥವೊಂದು ಬರುತ್ತಿದ್ದುದನ್ನು ನೋಡಿ, ತಮ್ಮ ಟೋಪಿಗಳನ್ನು ತೆಗೆದು, ಮೌನದಿಂದ ನಿಂತರು. ಆ ಶವದ ಮೆರವಣಿಗೆಯು ವಾಗಿರಾರ್ಡ್ ಸ್ಮಶಾನದ ಕಡೆಗೆ ಹೋಗುತ್ತಿದ್ದಿತು.

ಹಠಾತ್ತಾಗಿ ಆ ರಥವು ನಿಂತಿತು. ಎಲ್ಲರೂ ಹೆಬ್ಬಾಗಿಲಿಗೆ ಬಂದರು. ಶವಸಂಸ್ಕಾರದ ಅಪ್ಪಣೆಯ ಚೀಟಿಯನ್ನು ಅಲ್ಲಿ ತೋರಿಸುವುದಾವಶ್ಯಕವಾಗಿತ್ತು. ಶವವಾಹಕನು, ಆ ಸ್ಮಶಾನದ ಬಾಗಿಲು ಕಾಯುವವನ ಕಿವಿಯಲ್ಲಿ ಏನನ್ನೋ ಪಿಸುಗುಟ್ಟಿದನು. ಹೀಗೆ ಅವನು ಮಾತನಾಡುತ್ತಿದ್ದ ಒಂದೆರಡು ನಿಮಿಷಗಳ ಅವಧಿಯಲ್ಲಿ ಯಾವನೋ ಅಪರಿಚಿತನೊಬ್ಬನು ಬಂದು ರಥದ ಹಿಂದುಗಡೆ ಫಾಚೆಲ್‌ವೆಂಟನ ಪಾರ್ಶ್ವದಲ್ಲಿ ನಿಂತನು. ಅವನೊಬ್ಬ ಕೆಲಸದ ಆಳು. ದೊಡ್ಡ ದೊಡ್ಡ ಜೇಬುಗಳಿದ್ದ ಒಂದು ಅಂಗಿಯನ್ನು ಧರಿಸಿದ್ದನು. ಕಂಕುಳಲ್ಲಿ ಒಂದು ಗುದ್ದಲಿಯಿತ್ತು.

ಈ ಅಪರಿಚಿತ ಮನುಷ್ಯನನ್ನು ಫಾಚೆಲ್‌ವೆಂಟನು ನೋಡಿ, 'ನೀನು ಯಾರು?' ಎಂದನು.

'ನಾನು ಶವ ಸಮಾಧಿಯನ್ನಗೆಯುವವನು,' ಎಂದು ಅವನು ಉತ್ತರಕೊಟ್ಟನು.

ಇದನ್ನು ಕೇಳಿದ ಫಾಚೆಲ್‌ವೆಂಟನಿಗೆ ಎದೆಗೆ ಗುಂಡು ಬಡಿದಂತಾಯಿತು. 'ಆದರೆ ಅದು ಆಗಲಾರದು,' ಎಂದು ತೊದಲು ತೊದಲಾಗಿ ಬಿಕ್ಕಿ ಮಾತನಾಡುವುದಕ್ಕೂ ಸಹ ಅವನಿಗೆ ಶಕ್ತಿಯಿಲ್ಲದೆ ಹೋಯಿತು.

ರಥವು ಮುಂದುವರಿಯಿತು. ಫಾಚೆಲ್‌ವೆಂಟನು ಕಾತರನಾಗಿ ಸುತ್ತಲೂ ನೋಡಿದನು. ಮೈಯೆಲ್ಲವೂ ಬೆವರಿತು.

ಅವನ ಹಣೆಯಿಂದ ಬೆವರಿನ ಹನಿಗಳು ತೊಟ್ಟಿಕ್ಕುತ್ತಿದ್ದುವು.

ಆ ಶವದ ಪೆಟ್ಟಿಗೆಯುಲ್ಲಿದ್ದವರು ಯಾರು? ಗೊತ್ತೇ ಇದೆ. ಜೀನ್ ವಾಲ್ಜೀನನು!

ಜೀನ್ ವಾಲ್ಜೀನನು ಅದರಲ್ಲಿ ಸ್ವಲ್ಪ ಮಟ್ಟಿಗೆ ಉಸಿರಾಡಲವಕಾಶ ಮಾಡಿಕೊಂಡು ತಾನು ಬದುಕಿರಲು ಅನುಕೂಲಪಡಿಸಿಕೊಂಡಿದ್ದನು.

ಅವನು, ಅಲ್ಲಿ ತಾನು ಮೃತ್ಯು ದೇವತೆಯೊಡನೆ ಹೋರಾಡುತ್ತಿದ್ದ ಆ ಭಯಂಕರ ನಾಟಕದ ಪ್ರತಿಯೊಂದು ಭಾಗವನ್ನೂ ಆ ಪೆಟ್ಟಿಗೆಯ ತಳದ ಹಲಗೆಗಳ ಮೂಲಕ ಕ್ರಮವಾಗಿ ಕಿವಿಯಿಂದ ಕೇಳಿ ಗ್ರಹಿಸಿಕೊಂಡಿದ್ದನು. ಫಾಚೆಲ್‌ವೆಂಟನು ಪೆಟ್ಟಿಗೆಯ ಮೇಲಣ ಹಲಗೆಗಳ ಮೊಳೆಗಳನ್ನು ಬಡಿದು ಪೂರಯಿಸಿದೊಡನೆಯೇ, ಜೀನ್ ವಾಲ್ಜೀನನಿಗೆ ತನ್ನನ್ನು ರಥದಮೇಲೆ ಇಟ್ಟು ಸಾಗಿಸಿಕೊಂಡು ಹೋಗುತ್ತಿರುವರೆಂದು ಗೊತ್ತಾಯಿತು. ರಥವು ಕುಲುಕಾಡುತ್ತಿದ್ದುದು ಕಡಿಮೆಯಾದಾಗ ತಾನು ಕಲ್ಲು ಹಾಸಿದ್ದ ಸ್ಥಳದ ಮೇಲಿನಿಂದ ಗಟ್ಟಿಯಾದ ನೆಲಕ್ಕೆ ಬಂದೆನೆಂದು ತಿಳಿದುಕೊಂಡನು. ಎಂದರೆ, ಬೀದಿಯನ್ನು ದಾಟಿ ಸಾಲು ಮರಗಳ ಮಾರ್ಗಕ್ಕೆ ಪ್ರವೇಶಿಸಿದಂತೆ ಅವನಿಗೆ ತಿಳಿಯಿತು. ಒಂದು ತೆರದ ಮಂದವಾದ ಶಬ್ದದಿಂದ, ಅವನು ಆಸ್ಟರ್‌ಲಿಟ್ಸ್ ಸೇತುವೆಯನ್ನು ದಾಟುತ್ತಿದ್ದಂತೆ ಊಹಿಸಿದನು. ಮೊದಲನೆಯ ಸಲ ಅವರು ನಿಂತಾಗ ಸ್ಮಶಾನಕ್ಕೆ ಪ್ರವೇಶಿಸುತ್ತಿರುವರೆಂಬುದಾಗಿ ತಿಳಿದುಕೊಂಡನು. ಎರಡನೆಯ ಸಲ ನಿಂತಾಗ ಇದೇ ಸಮಾಧಿಯ ಗುಣಿ ಎಂದುಕೊಂಡನು.

ಯಾರೋ ಆ ಪೆಟ್ಟಿಗೆಯನ್ನು ಆತುರದಿಂದ ಹಿಡಿದುಕೊಂಡಂತೆಯೂ ಅದರ ಹಲಗೆಗಳಮೇಲೆ ಬಲವಾಗಿ ಕೆರೆಯುತ್ತಿದ್ದಂತೆಯೂ ಅವನಿಗೆ ತೋರಿತು. ಅದು, ಅವರು ಆ ಪೆಟ್ಟಿಗೆಯನ್ನು ಸಮಾಧಿಯ ಗುಣಿಯೊಳಕ್ಕೆ ಬಿಡುವುದಕ್ಕಾಗಿ ಅದಕ್ಕೆ ಸುತ್ತಲೂ ಹಗ್ಗವನ್ನು ಕಟ್ಟುತ್ತಿದ್ದ ಶಬ್ದವೆಂದು ಅವನು ನಿರ್ಧರ ಮಾಡಿಕೊಂಡನು.

ಆಗ ಅವನಿಗೆ ಸ್ವಲ್ಪ ಬುದ್ಧಿ ಭ್ರಮಣೆಯಾದಂತಾಯಿತು. ಬಹುಶಃ ಅದನ್ನು ಹೊತ್ತಿದ್ದವನೂ ಗುಣಿಯನ್ನು ಅಗೆಯುವವನೂ ಸೇರಿ ಆ ಪೆಟ್ಟಿಗೆಯ ತಲೆಯ ಕಡೆಯ ಭಾಗವನ್ನು ಕೆಳಗೆಮಾಡಿ ಗುಣಿಯೊಳಕ್ಕೆ ಬಿಟ್ಟರು. ಅನಂತರ ತಾನು ಅಡ್ಡಡ್ಡಲಾಗಿ ಚಲನೆಯಿಲ್ಲದೆ ಇದ್ದುದರಿಂದ ಸ್ವಲ್ಪ ಚೇತರಿಸಿಕೊಂಡನು. ಅವನು ಗುಣಿಯ ತಳಭಾಗವನ್ನು ಮುಟ್ಟಿದಾಗ ಅವನಿಗೆ ಒಂದು ವಿಧದ ಕಂಪವುಂಟಾಯಿತು.

ಅವನಿದ್ದ ಸ್ಥಳದ ಮೇಲುಗಡೆಯಲ್ಲಿ ದುಃಖ ಸೂಚನೆಯ ಕೆಲವು ಲ್ಯಾಟಿನ್ ಭಾಷೆಯ ಶಬ್ದಗಳು ಕೇಳಿಸಿದುವು. ಅವುಗಳು ಅವನಿಗೆ ಅರ್ಥವಾಗಲಿಲ್ಲ. ಜೀನ್ ವಾಲ್ಜೀನನು ಗಮನಿಸಿ ಕೇಳುತ್ತಿರಲು, ಹೆಜ್ಜೆಗಳು ಹಿಂದುಹಿಂದಕ್ಕೆ ಹೋಗುತ್ತಿರುವಂತೆ ತೋರಿಬಂತು.

ಆಗ ಅವನು, 'ಈಗ ಅವರೆಲ್ಲರೂ ಆ ಕಡೆ ಹೋಗುತ್ತಿದ್ದಾರೆ ನಾನೊಬ್ಬನೇ ಇದ್ದೇನೆ,' ಎಂದು ಆಲೋಚಿಸಿಕೊಳ್ಳುತ್ತಿರುವಲ್ಲಿ, ತಟ್ಟನೆ ಅವನ ತಲೆಯ ಮೇಲ್ಗಡೆ ಶಬ್ದವಾಗಿ ಅವನಿಗೆ ಸಿಡಿಲು ಬಡಿದಂತಾಯಿತು. ಅದು ಅವನಿದ್ದ ಪೆಟ್ಟಿಗೆಯ ಮೇಲಕ್ಕೆ ಗುದ್ದಲಿಯಿಂದೆತ್ತಿ ಎರಚಿದ ಮಣ್ಣು ಬಿದ್ದ ಶಬ್ದವು. ಮತ್ತೊಂದು ಗುದ್ದಲಿಯ ತುಂಬ ಮಣ್ಣು ಬಿತ್ತು. ಅವನು ಉಸಿರಾಡಲನುಕೂಲವಾಗಿ ಮಾಡಿದ್ದ ರಂಧ್ರಗಳು ಇದರಿಂದ ಮುಚ್ಚಿಹೋದುವು.

ಇನ್ನೂ ಒಂದು ಗುದ್ದಲಿಯ ಮಣ್ಣು ಬಿತ್ತು.

ಮತ್ತೂ ಒಂದು ಸಲ ಬಿತ್ತು.

ಅತ್ಯಂತ ಬಲಶಾಲಿಗಿಂತಲೂ ಬಲವಾದ ವಿಷಯಗಳಿರಲೇ ಇರುವವಷ್ಟೆ! ಜೀನ್ ವಾಲ್ಜೀನನಿಗೆ ಪ್ರಜ್ಞೆ ತಪ್ಪಿತು.

ಜೀನ್ ವಾಲ್ಜೀನನು ಮಲಗಿದ್ದ ಗುಣಿಯ ಮೇಲ್ಗಡೆಯಲ್ಲಿ ಏನಾಯಿತೆಂಬುದನ್ನು ನೋಡೋಣ.

ಬಂದಿದ್ದ ಪಾದ್ರಿಯೂ ಗಾಯಕನೂ ಶವರಥದೊಡನೆ

ಅಲ್ಲಿಂದ ಹೊರಟುಹೋಗುವವರೆಗೂ, ಆ ಗುಣಿಯುಗೆಯುುವವನನ್ನೇ ರೆಪ್ಪೆ ಹೊಡೆಯದೆ ನೋಡುತ್ತಿದ್ದ ಫಾಚೆಲ್‌ವೆಂಟನು, ಮಣ್ಣಿನ ರಾಶಿಯ ಮೇಲೆ ನೆಟ್ಟಗಿಟ್ಟಿದ್ದ ಗುದ್ದಲಿಯಿಂದ ಅವನು ಮಣ್ಣೆತ್ತಿ, ಆ ಸಮಾಧಿಯ ಗುಣಿಯೊಳಕ್ಕೆ ಎಸೆದುದನ್ನು ನೋಡಿದನು

ಕೆಲವು ನಿಮಿಷಗಳಾದ ಮೇಲೆ, ಗುದ್ದಲಿಗೆ ಮಣ್ಣನ್ನು ತುಂಬುವುದಕ್ಕಾಗಿ, ಆ ಗುಣಿ ತೆಗೆಯುವವನು ಸ್ವಲ್ಪ ಕೆಳಕ್ಕೆ ಬಗ್ಗಿರಲು, ಅವನ ಅಂಗಿಯ ಜೇಬು ತೆರೆದುಕೊಂಡಿತು. ದಿಗ್ಭ್ರಾಂತನಾಗಿದ್ದ ಫಾಚೆಲ್‌ವೆಂಟನ ಕಣ್ಣು ಸರಿಯಾಗಿ ಆ ಜೇಬಿನ ಮೇಲೆ ಬಿತ್ತು. ಅಲ್ಲದೆ ಆ ತೆರೆದಿದ್ದ ಜೇಬಿನಲ್ಲಿ ಏನೋ ಬೆಳ್ಳಗೆ ಕಂಡಿತು.

ಗುದ್ದಲಿಗೆ ಮಣ್ಣನ್ನು ತುಂಬಿಕೊಳ್ಳುವ ಗಮನದಲ್ಲಿದ್ದ ಆ ಮನುಷ್ಯನಿಗೆ ಗೋಚರವಿಲ್ಲದಂತೆ ಫಾಚೆಲ್‌ವೆಂಟನು ಹಿಂದಣಿಂದ ಅವನ ಜೇಬಿನಲ್ಲಿ ಬೆಳ್ಳಗೆ ಕಾಣುತ್ತಿದ್ದುದನ್ನು ತೆಗೆದುಕೊಂಡನು.

ಆಗ ಆ ಆಳು ಗುಣಿಯೊಳಕ್ಕೆ ನಾಲ್ಕನೆಯ ಸಲ ಗುದ್ದಲಿಯಿಂದ ಮಣ್ಣನ್ನು ಎಸೆದನು. ಐದನೆಯ ಸಲ ಮಣ್ಣನ್ನು ತೆಗೆದುಕೊಳ್ಳುತ್ತಿರುವಾಗ ಫಾಚೆಲ್‌ವೆಂಟನು, ಅವನನ್ನು ಕೇವಲ ಶಾಂತಭಾವದಿಂದ ನೋಡಿ, 'ಓಹೋ! ಅಂದಹಾಗೇ, ಮಿತ್ರಾ! ನಿನ್ನಲ್ಲಿ ಅಪ್ಪಣೆಯ ಚೀಟಿಯಿರುವುದೇ ?' ಎಂದನು. 'ಓಹೋ! ಅಪ್ಪಣೆಯ ಚೀಟಿಯೋ!' ಎಂದು ಅವನು ತನ್ನ ಜೇಬಿನಲ್ಲಿ ತಡಕಿ ನೋಡಿದನು. ಅದು ಇರಲಿಲ್ಲ.

ಗುಣಿಯುಗೆಯುವವನು—ಇಲ್ಲ, ನನ್ನಲ್ಲಿ ಚೀಟಿಯಿಲ್ಲ; ಬಹುಶಃ ಮರೆತುಬಂದಿದ್ದೇನೆ.

ಫಾಚೆಲ್‌ವೆಂಟ್—ಹದಿನೈದು ಫ್ರಾಂಕುಗಳ ದಂಡ ತೆರಬೇಕು.

ಗುಣಿತೆಗೆಯುವವನ ಮುಖವು ಬೆಳ್ಳಗಾಗಿ ಕಳೆಗುಂದಿತು.

ಫಾಚೆಲ್‌ವೆಂಟ್—ಇನ್ನೂ ವ್ಯವಧಾನವಿದೆ; ನಿನ್ನ ಉಡುಪನ್ನು ಹೆಗಲ ಮೇಲೆ ಹಾಕಿಕೊಂಡು ಈ ಕ್ಷಣವೇ ಹೊರಡು.

ಗುಣಿಯುಗೆಯುವವನು—ಅದೇ ಸರಿ.

ಫಾಚೆಲ್‌ವೆಂಟ್--ಹೆಬ್ಬಾಗಿಲಿನಿಂದ ಈಗಲೇ ಹೊರಟು ಮನೆಗೆ ಓಡಿಹೋಗಿ ನಿನ್ನ ಚೀಟಿಯನ್ನು ತೆಗೆದುಕೊಂಡು ಬಾ. ಬಾಗಿಲು ಕಾಯುವವನು ನಿನ್ನನ್ನು ಮತ್ತೆ ಒಳಗೆ ಬಿಡುವನು. ನಿನ್ನ ಚೀಟಿಯಿದ್ದಲ್ಲಿ, ನೀನು ಹಣವೇನನ್ನೂ ಕೊಡಬೇಕಾಗುವುದಿಲ್ಲ. ಅನಂತರ ನೀನು ಆ ಸತ್ತ ಮನುಷ್ಯನನ್ನು ಹೂಳಬಹುದು. ನಾನು ಇಲ್ಲಿಯೇ ಇದ್ದು ನೀನಿಲ್ಲದಿರುವಾಗ ಅವನು ಓಡಿಹೋಗದಂತೆ ನೋಡಿಕೊಳ್ಳುವೆನು.

ಗುಣಿಯಗೆಯುವವನು—ಅಯ್ಯಾ! ನೀನು ನನ್ನ ಪ್ರಾಣವನ್ನುಳಿಸಿದೆ.

ಫಾಚೆಲ್‌ವೆಂಟ್—ಹಾಗಾದರೆ ಹೊರಡು, ಬೇಗ ಹೋಗು. ಹುಂ.........

ಆ ಗುಣಿಯಗೆಯುವವನು ಮಿತಿಮೀರಿದ ಕೃತಜ್ಞತೆಯಿಂದ ಕೈ ಮುಗಿದು, ಆ ಕ್ಷಣವೇ ಓಡಲಾರಂಭಿಸಿದನು.

---

ಆ ಗುಣಿಯುಗೆಯುವವನು ಪೊದೆಗಳ ಹಿಂದೆ ಮರೆಯಾದ ಮೇಲೆ ಫಾಚೆಲ್‌ವೆಂಟನು ಅವನ ಹೆಜ್ಜೆಗಳ ಸಪ್ಪಳವು ಕೇಳದಂತಾಗುವ ವರೆಗೂ ಗಮನಿಸಿ ಕೇಳುತ್ತಿದ್ದು, ಅನಂತರ, ಸಮಾಧಿಯ ಗುಣಿಯ ಮೇಲೆ ಬಗ್ಗಿ ಮೆಲ್ಲನೆ, 'ಫಾದರ್ ಮೇಡಲಿನ್!' ಎಂದು ಕೂಗಿದನು.

ಉತ್ತರವು ಬರಲಿಲ್ಲ.

ಫಾಚೆಲ್‌ವೆಂಟನು ತಲ್ಲಣಿಸಿಹೋದನು. ಮೆಲ್ಲನೆ ಇಳಿಯುವುದಕ್ಕೆ ಪ್ರತಿಯಾಗಿ ಪೆಟ್ಟಿಗೆಯ ತಲೆಯಕಡೆ ಗುಣಿಯೊಳಕ್ಕೆ ಧುಮ್ಮಿಕ್ಕಿ, 'ಒಳಗಿರುವಿರಾ?' ಎಂದು ಕೂಗಿದನು.

ಪೆಟ್ಟಿಗೆಯೊಳಗೆ ನಿಶ್ಶಬ್ದವಾಗಿತ್ತು.

ಫಾಚೆಲ್‌ವೆಂಟನಿಗೆ ವೈಸಡುಕ ಹತ್ತಿ ಉಸಿರಾಡುವುದೂ ಕಷ್ಟವಾಯಿತು. ಆಗ ಅವನು ತನ್ನಲ್ಲಿದ್ದ ಉಳಿಯನ್ನೂ ಕೊಡತಿಯನ್ನೂ ತೆಗೆದುಕೊಂಡು ಪೆಟ್ಟಿಗೆಯ ಮೇಲಣ ಹಲಗೆಯನ್ನು ಎಬ್ಬಿ ತೆಗೆದುಹಾಕಿದನು. ಆ ಸಂಜೆಯ ಮಬ್ಬಿನಲ್ಲಿ ಜೀನ್ ವಾಲ್ಜೀನನ ಮುಖವು ಕಂಡಿತು. ಆದರೆ ಕಣ್ಣುಗಳು ಮುಚ್ಚಿದ್ದುವು. ಮುಖವು ಕಳೆಗೆಟ್ಟಿತ್ತು.

ಫಾಚೆಲ್‌ವೆಂಟನಿಗೆ ಗಾಬರಿಯಿಂದ ಮೈ ರೋಮಾಂಚವಾಯಿತು. ಬಗ್ಗಿದ್ದವನು ಎದ್ದು ನಿಲ್ಲುವುದಕ್ಕೇ ಸಾಧ್ಯವಿಲ್ಲದೆ, ಆದಿರುತ್ತ, ಗುಣಿಯ ಗೋಡೆಗೆ ಬೆನ್ನನ್ನು ಒರಗಿಸಿ, ಪೆಟ್ಟಿಗೆಯ ಮೇಲೆ ಬಿದ್ದುಬಿಡುವಷ್ಟರಲ್ಲಿದ್ದನು. ಆಗ ಮತ್ತೆ ಜೀನ್ ವಾಲ್ಜೀನನ ಕಡೆ ನೋಡಿದನು.

ಜೀನ್ ವಾಲ್ಜೀನನು ತೇಜೋಹೀನನಾಗಿ ಚಲಿಸದೆ ಬಿದ್ದಿದ್ದನು. ಫಾಚೆಲ್‌ವೆಂಟನು ತನ್ನಲ್ಲಿ ತಾನು ಮೆಲ್ಲನೆ, 'ಸತ್ತು ಹೋಗಿರುವನು,' ಎಂದು ಗೊಣಗುಟ್ಟಿಕೊಂಡನು.

ಮತ್ತೆ ಫಾಚೆಲ್‌ವೆಂಟನು ಜೀನ್ ವಾಲ್ಜೀನನ್ನು ಬಗ್ಗಿ

ನೋಡಿ ತಟ್ಟನೆ ಬಲು ಗಾಬರಿಯಿಂದ ಹಿಂಜರಿದನು. ಜೀನ್ ವಾಲ್ಜೀನನ ಕಣ್ಣುಗಳು ತೆರೆದು ಇವನನ್ನೇ ನೋಡುತ್ತಿದ್ದುವು.

ಜೀನ್ ವಾಲ್ಜೀನನು, 'ನನಗೆ ನಿದ್ದೆಬಂದಿತ್ತು' ಎಂದು ಎದ್ದು ಕುಳಿತನು.

ಫಾಚೆಲ್‌ವೆಂಟನು ಮೊಣಕಾಲೂರಿ ನಮಸ್ಕರಿಸಿ, 'ಆಹಾ! ಪುಣ್ಯಶೀಲೆಯಾದ ಯೋಗಿನೀಮಾತೇ! ನನಗೆಂತಹ ಭೀತಿಯನ್ನುಂಟುಮಾಡಿದ್ದೆ!' ಎಂದು ಹೇಳಿ, ಮೇಲಕ್ಕೆ ಎದ್ದು, 'ಫಾದರ್ ಮೇಡಲಿನ್, ನಮಸ್ಕಾರ,' ಎಂದನು.

ಜೀನ್ ವಾಲ್ಜೀನನು ಪ್ರಜ್ಞೆ ತಪ್ಪಿ ಮೂರ್ಛೆ ಬಿದ್ದಿದ್ದನು. ಗಾಳಿಯಾಡಿದ ಮೇಲೆ ಅವನಿಗೆ ಎಚ್ಚರವಾಯಿತು.

ಅನಂತರ ಪೆಟ್ಟಿಗೆಯಿಂದ ಹೊರಗೆ ಬಂದು ಪೆಟ್ಟಿಗೆಯ ಮುಚ್ಚಳವನ್ನು ಮುಚ್ಚಿ ಅದಕ್ಕೆ ಮತ್ತೆ ಮೊಳೆಗಳನ್ನು ಬಡಿಯುವುದರಲ್ಲಿ ಫಾಚೆಲ್‌ವೆಂಟನಿಗೆ ಸಹಾಯ ಮಾಡಿದನು. ಮೂರು ನಿಮಿಷಗಳೊಳಗೆ ಅವರಿಬ್ಬರೂ ಸಮಾಧಿಯಿಂದ ಹೊರಗೆ ಬಂದು, ಆ ಬರಿಯ ಪೆಟ್ಟಿಗೆಯನ್ನು ಹೂಳಿಬಿಟ್ಟರು.

ಗುಣಿಯನ್ನು ಪೂರ್ತಿಯಾಗಿ ಮುಚ್ಚಿದ ಮೇಲೆ, ಫಾಚೆಲ್‌ವೆಂಟನು ಜೀನ್ ವಾಲ್ಜೀನನನ್ನು ಕುರಿತು, 'ಬನ್ನಿ, ಹೋಗೋಣ, ನಾನು ಸನಿಕೆಯನ್ನು ತೆಗೆದುಕೊಳ್ಳುತ್ತೇನೆ. ನೀವು ಗುದ್ದಲಿಯನ್ನು ತೆಗೆದುಕೊಳ್ಳಿ,' ಎಂದನು.

ಅಲ್ಲಿಂದ ಒಂದು ಗಂಟೆಯಾದ ಮೇಲೆ, ನಿಶಿಯಲ್ಲಿ, ಇಬ್ಬರು ಗಂಡಸರೂ ಒಂದು ಮಗುವೂ ಪೆಟಿಟ್ ರೂ ಪಿಕ್ಪಸ್ ಬೀದಿಯ ೬೨ನೆಯ ನಂಬರು ಮನೆಯ ಎದುರಿಗೆ ನಿಂತಿದ್ದರು. ಅವರಲ್ಲಿ ಹಿರಿಯವನು ಬಾಗಿಲಿನ ಚಿಲುಕವನ್ನಲ್ಲಾಡಿಸಿ ಕದವನ್ನು ತಟ್ಟಿದನು.

ಮೊದಲೇ ಆಜ್ಞಪ್ತನಾಗಿದ್ದ ಬಾಗಿಲುಕಾಯುವವನು, ಪಕ್ಕದ ದಿಡ್ಡಿಯ ಬಾಗಿಲನ್ನು ತೆರೆದನು. ಇದೇ, ಅಂಗಳಕ್ಕೂ ತೋಟಕ್ಕೂ ಸಂಬಂಧಿಸಿದ್ದ ಬಾಗಿಲು. ಅಲ್ಲಿಂದ ಅವರು ಒಳಭಾಗದಲ್ಲಿದ್ದ ಫಾಚೆಲ್‌ವೆಂಟನ ಸ್ವಂತ ಕೊಠಡಿಗೆ ಹೋದರು.

ಇಲ್ಲಿಯೇ ಆ ಹಿಂದಿನ ರಾತ್ರಿ ಫಾಚೆಲ್ ವೆಂಟನು ಯೋಗಿನಿಯಿಂದ ಸಂದೇಶವನ್ನು ಪಡೆದಿದ್ದುದು.

ಆ ಮಠದ ಯಜಮಾನಿಯು ಜೀನ್ ವಾಲ್ಜೀನನ್ನು ಚೆನ್ನಾಗಿ ನೋಡಿದಳು. ಕೆಲವು ಪ್ರಶ್ನೋತ್ತರಗಳಾದನಂತರ ಇಬ್ಬರು ಯೋಗಿನಿಯರೂ ಆ ಪಡಸಾಲೆಯ ಮೂಲೆಯಲ್ಲಿ ಕೆಲವು ನಿಮಿಷಗಳ ಕಾಲ ಮೆಲ್ಲನೆ ತಮ್ಮಲ್ಲಿ ತಾವೇ ಮಾತನಾಡಿಕೊಂಡರು. ಅನಂತರ ಯಜಮಾನಿಯು ಹಿಂದಿರುಗಿ 'ಫಾದರ್ ಫಾಚೆಲ್ ವೆಂಟ್, ನೀನು ಇನ್ನೊಬ್ಬ ಸಹಾಯಕನನ್ನಿಟ್ಟುಕೊಳ್ಳಬಹುದು. ನಮಗೆ ಈಗ ಇಬ್ಬರು ಬೇಕು,' ಎಂದಳು.

ಹೀಗೆ ಜೀನ್ ವಾಲ್ಜೀನನಿಗೆ ಕ್ರಮವಾಗಿ ಉದ್ಯೋಗವು ದೊರೆಯಿತು. ಇಲ್ಲಿಂದ ಮುಂದಕ್ಕೆ ಅವನಿಗೆ ಕರ್ತವ್ಯವು ನಿಯಾಮಕವಾಯಿತು. ಅವನ ಹೆಸರು ಅಲ್ಟಿಮಸ್ ಫಾಚೆಲ್ ವೆಂಟ್ ಎಂದು.

ಕೋಸೆಟ್ಟಳು ಮಠದ ವಿದ್ಯಾರ್ಥಿನಿಯಾದಳು. ಅದರಿಂದ ಅವಳು ಆ ಮಠದ ಹುಡುಗಿಯರಂತೆ ಉಡಿಗೆಯನ್ನು ಧರಿಸಬೇಕಾಯಿತು. ಅವಳು ತೊಟ್ಟಿದ್ದ ಉಡಿಗೆಗಳನ್ನು ಜೀನ್ ವಾಲ್ಜೀನನಿಗೆ ಒಪ್ಪಿಸಿದರು. ಅದು, ಥೆನಾರ್ಡಿಯರನ ಬಳಿಯಿಂದ ಅವಳನ್ನು ಬಿಡಿಸಿಕೊಂಡು ಬಂದಾಗ ಅವಳಿಗೆ ಜೀನ್ ವಾಲ್ಜೀನನು ತಂದು ಕೊಟ್ಟಿದ್ದ ಬೆಳಗಿನ ಉಡುಪು. ಅದನ್ನು ಅವಳು ಹೆಚ್ಚಾಗಿ ಧರಿಸಿಯೇ ಇರಲಿಲ್ಲ. ಜೀನ್ ವಾಲ್ಜೀನನು ಈ ಉಡುಪುಗಳನ್ನೂ ಉಣ್ಣೆಯ ಕಾಲುಚೀಲಗಳನ್ನೂ ಪಾದರಕ್ಷೆಗಳನ್ನೂ ಕರ್ಪೂರವೇ ಮೊದಲಾದ, ಆ ಮಠದಲ್ಲಿ ಯಥೇಚ್ಛವಾಗಿರುವ ಸುವಾಸನಾ ದ್ರವ್ಯಗಳ ಸಹಿತವಾಗಿ ಸುತ್ತಿ, ಬೀಗವಿದ್ದ ಒಂದು ಕೈಚೀಲವನ್ನು ಹೇಗೋ ಸಂಪಾದಿಸಿ, ಅದರಲ್ಲಿ ಕಟ್ಟಿಟ್ಟನು. ಅನಂತರ ಈ ಚೀಲವನ್ನು ತನ್ನ ಹಾಸುಗೆಯ ಬಳಿಯಲ್ಲಿ ಒಂದು ಕುರ್ಚಿಯಮೇಲೆ ಇಟ್ಟು ಅದರ ಬೀಗದ ಕೈಯನ್ನು ಯಾವಾಗಲೂ ತನ್ನ ಜೇಬಿನಲ್ಲಿಯೇ ಇಟ್ಟುಕೊಂಡಿರುತ್ತಿದ್ದನು.

ಈ ಮಠವು ಜೀನ್ ವಾಲ್ಜೀನನಿಗೆ, ವಿಶಾಲವಾದ ಸಾಗರದ ಮಧ್ಯದಲ್ಲಿದ್ದ ದ್ವೀಪದಂತಿತ್ತು. ಈ ಮಠದ ಆವರಣವೇ ಇನ್ನು ಮುಂದೆ ಇವನಿಗೆ ಸಕಲ ಪ್ರಪಂಚವೂ ಆಯಿತು. ಇಲ್ಲಿ ಇವನು ಬೇಕಾದಹಾಗೆ ಬಯಲಲ್ಲಿದ್ದುಕೊಂಡು ಮನಶ್ಶಾಂತಿಯನ್ನು ಪಡೆಯುವುದಕ್ಕೂ, ಕೊಸೆಟ್ಟಳನ್ನು ನೋಡಿ ಸಂತೋಷಪಡುವುದಕ್ಕೂ ಅನುಕೂಲವಾಗಿತ್ತು.

ಸಂತೋಷ ಜೀವನವು ಇವನಿಗೆ ಮತ್ತೆ ಆರಂಭವಾಯಿತು.

---

ಈ ಸಮಯಕ್ಕೆ, ಮುಂದೆ ಕೋಸೆಟ್ಟಳ ಜೀವಮಾನದಲ್ಲಿ ವಿಶೇಷ ವಾಗಿ ಸಂಬಂಧಿಸುವ ಬಾಲಕನೊಬ್ಬನು ಪ್ಯಾರಿಸ್ ನಗರದಲ್ಲಿ ಬೆಳೆಯುತ್ತಿದ್ದನು. ಇವನ ಹೆಸರು ಮೇರಿಯಸ್ ಪಾಂಟ್‌ಮರ್ಸಿ ಎಂದು. ಇವನು ಎಂ. ಜಿಲ್ಲೆನಾರ್ಮಂಡ್ ಎಂಬ ವೃದ್ಧನ ದೌಹಿತ್ರನು. ಈ ಹುಡುಗನ ತಾಯಿಯು ಸತ್ತುಹೋಗಿದ್ದಳು. ಹುಟ್ಟಿದಾದಿನಿಂದ ತಾದೆಯ ವಿಷಯವನ್ನೇ ಇವನು ಅರಿಯನು. ಹೇಗೆಂದರೆ, ಇವನ ತಂದೆಯಾದ ಎಂ. ಪಾಂಟ್‌ಮರ್ಸಿಯು ಫ್ರೆಂಚ್ ರೆವೊಲ್ಯೂಷನ್ ಎಂಬ ಫ್ರಾನ್ಸ್ ದೇಶದ ರಾಜ್ಯವಿಪ್ಲವದಲ್ಲಿ ನೆಪೋಲಿಯನ್ನನ ಪಕ್ಷವಾಗಿ ಯುದ್ಧ ಮಾಡಿದ್ದನು. ಅವನ ತಾತ ನಾದರೋ ರಾಜ ಪ್ರಭುತ್ವವನ್ನೇ ಪ್ರಬಲವಾಗಿ ಅನುಮೋದಿ ಸುತ್ತಿದ್ದನು. ಪಾಂಟ್‌ಮರ್ಸಿಯು, ನೆಪೋಲಿಯನ್ನನ ಯುದ್ಧ ಪ್ರಕರಣಗಳನೇಕಗಳಲ್ಲಿ ಯುದ್ಧಮಾಡಿ ಪ್ರಸಿದ್ಧಿಗೆ ಬಂದಿದ್ದನು. ಇದರ ಪ್ರತಿಫಲವಾಗಿ ಇವನಿಗೆ 'ಬ್ಯಾರನ್' ಎಂಬ ರಾಜ ಕೀಯ ಪದವಿಯು ದೊರೆತಿದ್ದಿತು. ವಾಟರ್ಲೂ ಕದನದಲ್ಲಿ ಇವನಿಗೆ ಬಹಳ ಗಾಯವಾಗಿ ಹೆಣಗಳ ರಾಶಿಯ ಕೆಳಗೆ ಸಿಕ್ಕಿಬಿ ದ್ದಿದ್ದನು. ಆ ರಾತ್ರಿ ಯುದ್ಧರಂಗದಲ್ಲಿ ಒಬ್ಬ ಸೇನೆಯ ಕಳ್ಳನು, ಸಿಕ್ಕಿದುದನ್ನು ದೋಚಿಕೊಂಡು ಹೋಗಲು ಹೆಣಗಳ ನಡುವೆ ಸಂಚರಿಸುತ್ತಿದ್ದನು. ಅವನು ಅಲ್ಲಿ ಹರಿಯುತ್ತಿದ್ದ ರಕ್ತ ಪ್ರವಾಹ ದಲ್ಲಿಯೇ ನಡೆಯುತ್ತ ಭಯಂಕರವಾದ ಹೆಣಗಳ ರಾಶಿಯ ನಡುವೆ ಬರುತ್ತಿರುವಾಗ ತಟ್ಟನೆ ನಿಂತನು.

ಇವನ ಮುಂದೆ ಸ್ವಲ್ಪ ದೂರದಲ್ಲಿ ಆ ಮನುಷ್ಯರ ಮತ್ತು ಕುದುರೆಗಳ ರಾಶಿಯ ತಳದಿಂದ, ನೀಡಿದ ತೋಳು ಅಂಗೈ ತೆರೆ ದಿದ್ದುದು ಬೆಳ್ದಿಂಗಳ ಬೆಳಕಿನಲ್ಲಿ ಕಂಡುಬಂದಿತು.

ಈ ಕೈಯ ಒಂದು ಬೆರಳಿನಮೇಲೆ, ಏನೋ ಥಳಥಳನೆ ಹೊಳೆಯುತ್ತಿದ್ದಂತೆ ಕಂಡಿತು. ಅದು ಒಂದು ಚಿನ್ನದ ಉಂಗುರ.

ಆ ಕಳ್ಳನು ಕೆಳಕ್ಕೆ ಬಗ್ಗಿ ಒಂದು ಕ್ಷಣಮಾತ್ರ ಹಾಗೆಯೇ ನಿಂತಿದ್ದನು. ಅವನು ಪುನಃ ಮೇಲಕ್ಕೆ ಎದ್ದಾಗ ಆ ಬೆರಳಿನಲ್ಲಿ ಉಂಗುರವೇ ಇರಲಿಲ್ಲ. ಈ ಸಮಯಕ್ಕೆ ತಟ್ಟನೆ ಅವನಿಗೆ ಏನೋ ಧಕ್ಕೆ ಬಡಿದಂತಾಯಿತು. ಹಿಂದಣಿಂದ ಯಾರೋ ಅವನನ್ನು ಹಿಡಿದುಕೊಂಡಂತೆ ತೋರಿತು. ಹಿಂದಕ್ಕೆ ತಿರುಗಿದನು. ಹಿಂದೆ ಅವನು ನೋಡಿದ್ದ ಆ ಕೈಯೇ ಅವನ ನಿಲುವಂಗಿಯ ಒಂದು ಕಡೆಯ ಅಂಚನ್ನು ಬಲವಾಗಿ ಹಿಡಿದಿತ್ತು. ಸತ್ತವಂತನಾಗಿದ್ದರೆ ಅವನಿಗೆ ಬಹಳ ಭಯವಾಗುತ್ತಿತ್ತು. ಇವನಾದರೋ ನಗುವುದಕ್ಕಾರಂಭಿಸಿದನು.

'ಓಹೋ! ಸತ್ತ ಮನುಷ್ಯನು ತಾನೇ! ಸಿಪಾಯಿಗಿಂತಲೂ ದೆವ್ವವನ್ನು ಕಂಡರೆ ನನಗೆಷ್ಟೋ ಸಂತೋಷ!' ಎಂದುಕೊಂಡನು. ಹೇಗಾದರೂ, ಆ ಕೈಯು ಸಡಿಲವಾಗಿ ಕಳಚಿ ಅವನನ್ನು ಬಿಟ್ಟುಬಿಟ್ಟಿತು. ಆಗ ಪಿಶಾಚನು, 'ಆಹಾ! ಈ ಸತ್ತ ಮನುಷ್ಯನು ಬದುಕಿ ಬಂದಿರುವನೇ? ಆಗಲಿ ನೋಡೋಣ,' ಎಂದು ಹಿಂದಕ್ಕೆ ಬಂದನು.

ಅವನು ಮತ್ತೆ ಬಗ್ಗಿ, ಹೆಣಗಳ ರಾಶಿಯಲ್ಲಿ ತಡಕುತ್ತ, ಅವನ ಕೈಗೆ ಅಡ್ಡಿಯಾಗಿ ಸಿಕ್ಕಿದುದನ್ನೆಲ್ಲವನ್ನೂ ಆಚೆಗೆ ನೂಕಿ, ಆ ಕೈಯನ್ನು ಹಿಡಿದು ತೋಳನ್ನೆತ್ತಿ, ಆ ಶರೀರವನ್ನು ಹೊರಕ್ಕೆ ಎಳೆದುಕೊಂಡನು. ಆ ಶರೀರವು ಒಬ್ಬ ಮೇಲು ದರ್ಜೆಯ ಅಧಿಕಾರಿಯದಾಗಿದ್ದಿತು. ಭಯಂಕರವಾದ ಕತ್ತಿಯ ಪೆಟ್ಟಿನಿಂದ ಆ ಮುಖದ ಆಕಾರವೇ ಕೆಟ್ಟುಹೋಗಿತ್ತು. ಅದರಿಂದ ಅಲ್ಲಿ ರಕ್ತವಲ್ಲದೆ ಮತ್ತೇನೂ ಕಾಣುತ್ತಿರಲಿಲ್ಲ. ಹೇಗಾದರೂ ಅವನ ಯಾವ ಅಂಗವೂ ಮುರಿದಿದ್ದಂತೆ ಕಾಣಲಿಲ್ಲ. ಏನೋ ಆಕಸ್ಮಿಕ ಸಂಭವದಿಂದ, ಇತರ ಹೆಣಗಳ ಶರೀರಗಳು ಇವನ ಮೇಲೆ ಬಿಲ್ಲಿನಂತೆ ಬಾಗಿ ಬಿದ್ದಿದ್ದ ಕಾರಣ ಇವನ ಶರೀರವು ಜಜ್ಜಿಹೋಗದೆ ಸರಿಯಾಗಿರಲವಕಾಶವಾಗಿತ್ತು. ಅವನ ಕಣ್ಣುಗಳು ಮುಚ್ಚಿದ್ದುವು.

ಆ ಸಂಚಾರಿಯು ಅಧಿಕಾರಿಯ ಜೇಬಿಗೆ ಕೈಯಿಟ್ಟು ತಡಕಲು ಅದರಲ್ಲಿ ಒಂದು ಗಡಿಯಾರವು ಸಿಕ್ಕಿತು. ಅದನ್ನು ತೆಗೆದುಕೊಂಡು ಅವನ ಒಳ ಅಂಗಿಯನ್ನು ಶೋಧಿಸಿ ನೋಡಲು, ಅದರಲ್ಲಿ ಒಂದು ಹಣದ ಚೀಲವು ಸಿಕ್ಕಿತು. ಅದನ್ನೂ ತೆಗೆದು ತನ್ನ ಜೇಬಿಗೆ ಸೇರಿಸಿದನು. ಆಗತಾನೆ ಅಧಿಕಾರಿಯು ಕಣ್ಣನ್ನು ತೆರೆದು, ಬಲಹೀನ ಸ್ವರದಿಂದ, 'ನಿನಗೆ ಒಳ್ಳೆಯದಾಗಲಿ,' ಎಂದನು.

ಅವನನ್ನು ಹಿಡಿದೆತ್ತಿದ ಮನುಷ್ಯನು ಅವನ ದೇಹವನ್ನು ಒರಟೊರಟಾಗಿ ಎಳೆದುದರಿಂದಲೂ ರಾತ್ರಿಯ ತಂಗಾಳಿಯಿಂದಲೂ, ಅವನು ನಿರಾತಂಕವಾಗಿ ನಿರ್ಮಲ ವಾಯುವನ್ನು ಉಚ್ಛ್ವಾಸಿಸಿದುದರಿಂದಲೂ ಅವನಿಗೆ ಸ್ವಲ್ಪ ಚೇತನವುಂಟಾಯಿತು.

ಆ ಸಂಚಾರಿಯು ಅವನಿಗೆ ಉತ್ತರವನ್ನೇ ಹೇಳಲಿಲ್ಲ. ತಲೆಯನ್ನು ಮಾತ್ರ ಮೇಲಕ್ಕೆ ಎತ್ತಿದನು. ಜನರ ನಡಿಗೆಯ ಶಬ್ದವು ಮೈದಾನದ ಮೇಲಣಿಂದ ಕೇಳಿಸುತ್ತಿದ್ದಿತು. ಬಹುಶಃ ಅದು ಸಮೀಪಕ್ಕೆ ಬರುತ್ತಿದ್ದ ಕಾವಲು ಸಿಪಾಯಿಗಳ ಹೆಜ್ಜೆಯ ಸದ್ದಾಗಿರಬಹುದು.

ಆ ಅಧಿಕಾರಿಯ ಸ್ವರದಲ್ಲಿ ಇನ್ನೂ ನರಳುವ ಚಿಹ್ನೆಗಳು ತೋರಿಬಂದುವು. ಅವನು, 'ಯುದ್ಧದಲ್ಲಿ ಯಾರು ಗೆದ್ದರು?' ಎಂದು ಗೊಣಗಿದನು.

'ಇಂಗ್ಲಿಷರು,' ಎಂದು ಆ ಕಳ್ಳನು ಹೇಳಿದನು. ಅದಕ್ಕೆ ಅಧಿಕಾರಿಯು, 'ನನ್ನ ಜೇಬುಗಳಲ್ಲಿ ಹುಡುಕು. ಒಂದು ಹಣದ ಚೀಲವೂ ಒಂದು ಗಡಿಯಾರವೂ ಸಿಕ್ಕುವುವು. ಅವುಗಳನ್ನು ತೆಗೆದುಕೋ,' ಎಂದನು. ಈ ಕೆಲಸವನ್ನು ಅವನು ಮೊದಲೇ ಮಾಡಿದ್ದನು. ಆದರೂ ಮತ್ತೆ ಅವನ ಆಜ್ಞೆಯನ್ನು ನಡೆಯಿಸಿದಂತೆ ನಟಿಸಿ, ಹುಡುಕಿ, 'ಜೇಬುಗಳಲ್ಲಿ ಏನೂ ಇಲ್ಲ,' ಎಂದನು. ಅದಕ್ಕೆ ಅಧಿಕಾರಿಯು, 'ಅಯ್ಯೋ! ಯಾರೋ ಅವುಗಳನ್ನಪಹರಿಸಿರುವರು. ಇದ್ದಿದ್ದರೆ ಅವುಗಳನ್ನು ನೀನೇ ತೆಗೆದುಕೊಳ್ಳಬಹುದಾಗಿತ್ತು,' ಎಂದನು.

ಕಾವಲಿನ ಸಿಪಾಯಿಗಳ ಹೆಜ್ಜೆಯ ಶಬ್ದವು ಬರಬರುತ್ತ ಇನ್ನೂ ಸ್ಪಷ್ಟವಾಗಿ ಕೇಳಿಬಂತು.

ಆಗ ಆ ಸಂಚಾರಿಯು, 'ಯಾರೋ ಬರುತ್ತಿರುವರು, ಎಂದು, ಹೊರಡಲುದ್ಯುಕ್ತನಾದನು.

ಅಧಿಕಾರಿಯು ಬಹಳ ನೋವಿನಿಂದ ಒಂದು ತೋಳನ್ನೂರಿ ಎದ್ದು ಅವನನ್ನು ಹಿಡಿದು ನಿಲ್ಲಿಸಿ, 'ನೀನು ನನ್ನ ಪ್ರಾಣವನ್ನುಳಿಸಿರುವೆ, ನಿನ್ನ ಹೆಸರೇನು ?' ಎಂದನು.

'ಥೆನಾರ್ಡಿಯರ್,' ಎಂದು ಉತ್ತರವು ಬಂತು. ಆಗ ಆ ಅಧಿಕಾರಿಯು, 'ಆ ಹೆಸರನ್ನು ನಾನೆಂದಿಗೂ ಮರೆಯುವುದಿಲ್ಲ ; ನೀನು ನನ್ನ ಹೆಸರನ್ನು ಜ್ಞಾಪಕದಲ್ಲಿಟ್ಟುಕೊ, ನನ್ನ ಹೆಸರು ಪಾಂಟ್‌ಮರ್ಸಿ,' ಎಂದನು.

ಪಾಂಟ್‌ಮರ್ಸಿಯು ಜೀವಿಸಿದ್ದನು. ಅವನ ಹೆಂಡತಿಯು ಒಬ್ಬ ಮಗನನ್ನು ಹೆತ್ತು ಸ್ವಲ್ಪ ದಿನಗಳಲ್ಲಿಯೇ ಸತ್ತುಹೋಗಿದ್ದಳು. ಪಾಂಟಮರ್ಸಿಯ ಮಾವನು ತನ್ನ ಮಗಳ ಮಗನಾದ ಮೇರಿಯುಸ್ಸನನ್ನು ತನ್ನ ಪೋಷಣೆಗೆ ಕೊಡಬೇಕೆಂತಲೂ, ಹಾಗೆ ಕೊಡದಿರುವ ಭಾಗದಲ್ಲಿ ತಾನು ಅವನನ್ನು ತನ್ನ ದೌಹಿತ್ರನೆಂದು ಭಾವಿಸುವುದಿಲ್ಲವಾದುದರಿಂದ ತನಗೂ ಅವನಿಗೂ ಯಾವ ಸಂಬಂಧವೂ ಇರುವುದಿಲ್ಲವೆಂತಲೂ, ಹಠ ಹಿಡಿದು, ಖಂಡಿತವಾಗಿ ಹೇಳಿದ್ದನು. ಮಗುವಿನ ಮುಂದಣ ಅನುಕೂಲತೆಗಾಗಿ, ತಂದೆಯು ಆ ಮಗುವನ್ನು ಅವನ ತಾತನ ವಶಕ್ಕೆ ಒಪ್ಪಿಸಿದ್ದನು. ಈ ಹುಡುಗನು ತಂದೆಯ ವಿಷಯವೇನನ್ನೂ ಅರಿಯದೆಯೂ ತಿಳಿಯಬೇಕೆಂಬ ಕುತೂಹಲವಿಲ್ಲದೆಯೂ ದೊಡ್ಡವನಾದನು.

ಅವನಿಗೆ ಹದಿನೆಂಟು ವರ್ಷಗಳ ವಯಸ್ಸಾದಾಗ, ಪಾಂಟ್‌ಮರ್ಸಿಯು ಮರಣಾವಸ್ಥೆಯಲ್ಲಿರುವನೆಂತಲೂ, ಅವನು ಮೇರಿಯುಸ್ಸನನ್ನು ನೋಡಲಪೇಕ್ಷಿಸುತ್ತಿರುವನೆಂತಲೂ ಬರೆದ ಒಂದು ಪತ್ರವು ಬಂತು. ಆ ಮಾರನೆಯ ದಿನವೇ ಮೇರಿಯುಸ್ಸನು ಹೊರಟು ತನ್ನ ತಂದೆಯು ವಾಸಿಸುತ್ತಿದ್ದ ಹಳ್ಳಿಗೆ ಬಂದನು.

ಆದರೆ ಕಾರ್ಯವು ವಿಫಾರಿಹೋಗಿತ್ತು. ವನ ತಂದೆಯು ಸತ್ತು ಹೋಗಿದ್ದನು. ತನ್ನ ಮಗನಿಗಾಗಿ ಪಾಂಟ್‌ಮರ್ಸಿಯು ಇಟ್ಟಿದ್ದುದು ಒಂದು ಕಾಗದ ಮಾತ್ರವೇ! ಅದರಲ್ಲಿ ಈ ಮುಂದೆ ಹೇಳುವ ಮೇರೆಗೆ ಬರೆದಿತ್ತು:

'ನನ್ನ ಮಗನಿಗೆ—ಚಕ್ರವರ್ತಿಯು ವಾಟರ್ಲೂ ಯುದ್ಧರಂಗದಲ್ಲಿ ನನಗೆ ಬ್ಯಾರನ್ ಪದವಿಯನ್ನನುಗ್ರಹಿಸಿದನು. ನಾನು ನನ್ನ ರಕ್ತವನ್ನು ಬಸಿದು ಸಂಪಾದಿಸಿದ ಈ ಬಿರುದನ್ನು ಕುರಿತು ಪ್ರಭುತ್ವ ಪಕ್ಷದವರು ಒಪ್ಪದಿರುವ ಕಾರಣ ನನ್ನ ಮಗನು ಇದನ್ನು ವಹಿಸಿ ತನ್ನ ಹಕ್ಕನ್ನು ಸ್ಥಿರಪಡಿಸಿಕೊಳ್ಳಲಿ. ಅವನು ಆ ಪದವಿಗೆ ಅರ್ಹನಾಗಿರುವಂತೆ ನಡೆದುಕೊಳ್ಳಬೇಕೆಂಬುದನ್ನು ನಾನು ಹೇಳಬೇಕಾದುದಿಲ್ಲ.' ಅಲ್ಲದೆ, ಆ ಕಾಗದದ ಹಿಂದುಗಡೆಯಲ್ಲಿ, 'ಇದೇ ವಾಟರ್ಲೂ ಯುದ್ಧದಲ್ಲಿ ಒಬ್ಬ ಅಧಿಕಾರಿಯು ನನ್ನ ಪ್ರಾಣವನ್ನುಳಿಸಿದನು. ಆತನ ಹೆಸರು ಥೆನಾರ್ಡಿಯರ್. ಸ್ವಲ್ಪ ದಿನಗಳ ಹಿಂದೆ ಆತನು ಪ್ಯಾರಿಸ್ ನಗರದ ಶಾಖಾ ನಗರಗಳಾದ ಚೆಲ್ಲಿಸ್ ಎಂಬ ಊರಿನಲ್ಲಿಯೋ ಅಥವಾ ಮಾಂಟ್‌ಫಿಯರ್ ಮೆಯಿಲ್ ಎಂಬ ಊರಿನಲ್ಲಿಯೋ ಒಂದು ಚಿಕ್ಕ ಸತ್ರವನ್ನಿಟ್ಟುಕೊಂಡಿದ್ದನೆಂದು ತೋರುವುದು. ನನ್ನ ಮಗನು ಥೆನಾರ್ಡಿಯರನನ್ನು ಸಂಧಿಸಿದುದೇ ಆದರೆ ಅವನಿಗೆ, ತನ್ನ ಕೈಯಿಂದ ಆದಷ್ಟು ಉಪಕಾರವನ್ನು ಮಾಡಲಿ,' ಎಂಬ ಆಜ್ಞೆಯೂ ಇತ್ತು.

ತನ್ನ ತಂದೆಗಾಗಿ ಈ ಕಾರ್ಯವನ್ನು ಮಾಡಬೇಕೆಂದಿಲ್ಲದಿದ್ದರೂ, ಮನುಷ್ಯನ ಹೃದಯದಲ್ಲಿ ಸ್ವಾಭಾವಿಕವಾದ, ಸಾವಿನ ಸಂದರ್ಭದಲ್ಲಿ ಹುಟ್ಟುವ ಗೌರವದಿಂದ ಮೇರಿಯುಸ್ಸನು ಈ ಕಾಗದವನ್ನು ತೆಗೆದಿಟ್ಟುಕೊಂಡನು.

ಮೇರಿಯುಸ್ಸನು ಎಳೆಯ ಮಗುವಾಗಿದ್ದಾಗ ಪ್ಯಾರಿಸ್ ನಗರದಲ್ಲಿದ್ದ ಒಂದು ಪ್ರಾರ್ಥನಾಲಯಕ್ಕೆ (Church) ಅವನನ್ನು ಕರೆದುಕೊಂಡು ಬರುವ ಪದ್ಧತಿಯಿತ್ತು. ಇವನ ತಂದೆಯಾದ ಎಂ. ಪಾಂಟ್‌ಮರ್ಸಿಯು ಆ ಸಮಯಕ್ಕೆ ಸರಿಯಾಗಿ, ತನ್ನ ಮಗ

ನನ್ನು ನೋಡುವ ಉದ್ದೇಶದಿಂದ ಅಲ್ಲಿಗೆ ಬಂದು, ತನ್ನ ಮಗನಿಗೆ ತಿಳಿಯದಂತೆ ಇದ್ದು ಹೋಗುತ್ತಿದ್ದನೆಂದು ಆ ಪ್ರಾರ್ಥನಾಲಯದ ಪಾರುಪತ್ಯಗಾರನು ಆಕಸ್ಮಿಕವಾಗಿ ಮೇರಿಯುಸ್ಸನಿಗೆ ತಿಳಿಸದೇ ಇದ್ದಿದ್ದರೆ, ಇವನಿಗೆ ತನ್ನ ತಂದೆಯ ವಿಷಯವೊಂದೂ ಜ್ಞಾಪಕ ವಿರುತ್ತಿರಲಿಲ್ಲ.

ಮೇರಿಯುಸ್ಸನು ಎಂದಾದರೂ ಐಶ್ವರ್ಯವಂತನಾಗಿಯೂ ಸುಖಿಯಾಗಿಯೂ ಆಗಬೇಕೆಂಬ ಉದ್ದೇಶದಿಂದ, ಅವನ ತಂದೆಯು ತನ್ನ ಮಗನನ್ನು ತನ್ನ ಬಳಿಯಲ್ಲಿ ಇಟ್ಟುಕೊಂಡು ಸಂತೋಷ ಪಡ ಬೇಕೆಂಬ ಆಸೆಯನ್ನೂ ತೊರೆದಿದ್ದನೆಂದು ಆ ಪಾರುಪತ್ಯಗಾರನು ಮೇರಿಯುಸ್ಸನಿಗೆ ಹೇಳಿದ್ದುದು ಮಾತ್ರವಲ್ಲದೆ, ಪಾಂಟ್‌ಮರ್ಸಿಯು ನೆಪೋಲಿಯನ್ ಚಕ್ರವರ್ತಿಯ ಮುಖ್ಯ ಸೇನಾಪತಿಗಳಲ್ಲಿ ಒಬ್ಬ ನೆಂತಲೂ, ಸೈನ್ಯದಲ್ಲಿ ಹೆಸರುವಾಸಿಯನ್ನು ಪಡೆದಿದ್ದನೆಂತಲೂ ಹೇಳಿದನು.

ಆ ದಿನ ಮೊದಲಾಗಿ, ಮೇರಿಯುಸ್ಸನು ತನ್ನ ತಂದೆಯ ವಿಷ ಯವಾದ ಲೇಖನಗಳಿಗಾಗಿ ವಿಧವಿಧ ವರ್ತಮಾನ ಪತ್ರಿಕೆಗಳ ಕಟ್ಟುಗಳನ್ನು ಹುಡುಕಿ ನೋಡಲಾರಂಭಿಸಿದನು. ಸ್ವಲ್ಪ ಕಾಲ ದಲ್ಲಿಯೇ ಅವನು ಆ ಮಹಾ ವೀರನನ್ನು ಗೌರವಿಸಿ ಪೂಜಿಸುವ ಪಿತೃಭಕ್ತನಾದುದಲ್ಲದೆ ಫ್ರಾನ್ಸ್ ದೇಶದ ಪ್ರಜಾಪ್ರತಿನಿಧಿ ಪ್ರಭು ತ್ವದ ಪಕ್ಷಪಾತಿಯಾದನು. ಇವನ ತಾತನಿಗೆ ಇದು ತಿಳಿದ ಕೂಡಲೇ ಆತನು ಇವನಿಗೆ ಮನೆಯನ್ನು ಬಿಟ್ಟುಹೋಗುವಂತೆ ಆಜ್ಞೆಮಾಡಿದನು.

ಸುಖವೈಭವದಲ್ಲಿ ಬೆಳೆದಿದ್ದ ಅವನು ಅಲ್ಲಿಂದ ಮುಂದೆ ಗತಿಯಿಲ್ಲದೆ ಕಷ್ಟಕೆಲಸಮಾಡಿ ಜೀವಿಸಬೇಕಾಯಿತು. ಹೇಗೋ ಜೀವನ ಮಾಡಿಕೊಂಡು ನಾಲ್ಕು ವರ್ಷಗಳ ಕಾಲದಲ್ಲಿ ಒಬ್ಬ ನ್ಯಾಯವಾದಿ (Lawyer) ಯಾಗುವ ಯೋಗ್ಯತೆಯನ್ನು ಸಂಪಾದಿಸಿದನು. ಈ ಕಾಲದ ಸುಮಾರಿನಲ್ಲಿ, ಇವನು ಲಕ್ಸಂಬರ್ಗ್ ತೋಟದಲ್ಲಿ ನಿತ್ಯವೂ ಸಂಚಾರ ಹೋಗುತ್ತಿದ್ದಾಗ ಅಲ್ಲಿ ಒಂದು

ಕಲ್ಲು ಬೆಂಚಿನಮೇಲೆ ಪ್ರತಿ ದಿನವೂ ಒಬ್ಬ ಮುದುಕನೂ ಒಬ್ಬ ಸುಂದರಿಯಾದ ಕನ್ಯೆಯೂ ಕುಳಿತಿದ್ದುದು ಇವನ ಗಮನಕ್ಕೆ ಬಿತ್ತು. ಈ ಮುದುಕನೇ ಜೀನ್ ವಾಲ್ಜೀನನು. ಈಗ ಇವನು ಅಲ್ಟಿಮಸ್ ಫಾಚೆಲ್‌ವೆಂಟ್ ಎಂದು ಹೆಸರಿಟ್ಟುಕೊಂಡಿದ್ದನು. ಆ ಕನ್ಯೆಯೇ ಕೋಸೆಟ್ಟಳು. ಅಲ್ಲಿ ಸಂಚರಿಸುತ್ತಿದ್ದ ವಿದ್ಯಾರ್ಥಿಗಳು ಇವನ ಬಿಳಿಯ ಕೂದಲನ್ನು ನೋಡಿ ಇವನಿಗೆ ಮಾ. ಲೆಬ್ಲಾಂಕ್, ಎಂದರೆ ಮಹಾರಾಜ ಶ್ರೀ ಬಿಳಿಯಪ್ಪನವರು, ಎಂದು ಹೆಸರಿಟ್ಟರು. ಮೇರಿಯಸ್ಸನೂ ಕೋಸೆಟ್ಟಳೂ ಒಬ್ಬರಲ್ಲೊಬ್ಬರು ಒಂದು ಮಾತನ್ನಾಡದಿದ್ದರೂ ಅವರಲ್ಲಿ ಪರಸ್ಪರ ಮೋಹವು ಮಾತ್ರ ಬೇರೂರಿತ್ತು. ಮೇರಿಯಸ್ಸನು ಅವಳನ್ನು ನೋಡಿ ಸಂತೋಷ ಪಡುವ ಉದ್ದೇಶದಿಂದ ಮಾತ್ರವೇ ಪ್ರತಿನಿತ್ಯವೂ ತಪ್ಪದೆ ಆ ತೋಟಕ್ಕೆ ಹೋಗುತ್ತಿದ್ದನು. ಕಟ್ಟಕಡೆಗೆ ಅವನು, ತಾನು ಮೋಹಿಸಿರುವ ಕನ್ಯೆಯು ಎಲ್ಲಿ ವಾಸಿಸುತ್ತಿರುವಳೆಂಬುದನ್ನು ನೋಡುವುದಕ್ಕಾಗಿ, ಅವರಿಬ್ಬರನ್ನೂ ಹಿಂಬಾಲಿಸಿ ಅವರ ಮನೆಗೇ ಹೋದನು. ಇದು ತಪ್ಪಾಯಿತು. ಇದರಿಂದ ಜೀನ್ ವಾಲ್ಜೀನನ ಮನಸ್ಸಿಗೆ ಭಯವುಂಟಾಯಿತು. ಅವನು ಕೋಸೆಟ್ಟಳನ್ನು ಕರೆದುಕೊಂಡು ಆ ನಗರದ ಬೇರೆ ಬೀದಿಗೆ ಹೊರಟುಹೋದನು. ಅವನ ವಿಳಾಸವು ಯಾರಿಗೂ ತಿಳಿದಿರಲಿಲ್ಲ. ಮೇರಿಯಸ್ಸನು ನಿರಾಶನಾದನು. ಅನೇಕ ವಾರಗಳ ವರೆಗೆ ಅವನು ಮತ್ತೇನನ್ನೂ ಗಮನಿಸಿದೆ ಅವರನ್ನೇ ಹುಡುಕುತ್ತ ಬೀದಿಬೀದಿಯನ್ನೂ ಅಲೆದನು. ಅವನಿಗೆ ಸಿಕ್ಕಿದ ಸೂಚನೆಯು ಒಂದು ಕರವಸ್ತ್ರವು ಮಾತ್ರವೆ. ಅದನ್ನು ಒಂದು ದಿನ ಅವರು ಕಲ್ಲು ಬೆಂಚಿನ ಮೇಲೆ ಮರೆತು ಹೋಗಿದ್ದರು. ಅದರ ಮೇಲೆ ಯು. ಎಫ್. ಎಂಬ ಎರಡಕ್ಷರಗಳ ಗುರುತಿದ್ದಿತು. ಇದರಿಂದ ಅವಳ ಹೆಸರು ಅರಸೂಲ ಎಂದು ಮೊದಲಾಗಬಹುದೆಂದು ಫಕ್ಕನೆ ನಿರ್ಧರಿಸಿದನು.

ಈ ಕಾಲದಲ್ಲಿ, ಮೇರಿಯಸ್ಸನು ಬಡವರ ಗುಂಪಿನಲ್ಲಿ ಒಂದು ಬಾಡಿಗೆಯ (garret) ಕೊಠಡಿಯಲ್ಲಿ ವಾಸಮಾಡಿಕೊಂಡಿದ್ದನು.

ಈ ಮನೆಯ ಇನ್ನೊಂದು ಭಾಗದಲ್ಲಿ ವಾಸಮಾಡಿಕೊಂಡಿದ್ದ ಜಾಂಡ್ರೆಟ್ ಎಂಬ ಸಂಸಾರದವರನ್ನು ಸ್ವಲ್ಪವೂ ಗಮನಿಸಿಯೇ ಇರಲಿಲ್ಲ. ಒಂದು ದಿನ ಆ ಸಂಸಾರದ ಯಜಮಾನನಿಂದ ಇವನಿಗೆ ಒಂದು ಪ್ರಾರ್ಥನಾ ಪತ್ರವು ಬಂತು. ಅದನ್ನು ಆ ಯಜಮಾನನ ಒಬ್ಬ ಹೆಣ್ಣು ಮಗಳು ತಂದು ಇವನಿಗೆ ಕೊಟ್ಟಳು. ಅವಳು ಹೊಟ್ಟೆ ಬಟ್ಟೆಗಳಿಗೆ ಗತಿಯಿಲ್ಲದೆ ಹಸಿವಿನಿಂದ ಕೃಶಳಾಗಿ ಹರಕು ಬಟ್ಟೆಗಳನ್ನುಟ್ಟಿದ್ದುದನ್ನು ನೋಡಿ ಮೇರಿಯುಸ್ಸನ ಎದೆಯೊಡೆಯುವಂತಾಯಿತು. ಇವನು ಪ್ಯಾರಿಸ್ ನಗರದ ಓಣಿಗಳಲ್ಲಿದ್ದ ಪಾಪಿಗಳ ಪಾಡನ್ನು ಸಮೀಪದಲ್ಲಿದ್ದು ನೋಡಿದುದು ಇದೇ ಮೊದಲು.

## ೧೨

ಮೇರಿಯುಸ್ಸನು ಕೊಠಡಿಯಲ್ಲಿರುವಾಗ ಜಾಂಡ್ರೆಟ್ಟನ ಮಗಳು ಬಂದು, ಲೇಖನಿಯನ್ನು ತೆಗೆದುಕೊಂಡು, ಒಂದು ಬರಿಯ ಕಾಗದದ ಮೇಲೆ 'ಪೋಲೀಸಿನವರು ಬಂದಿದ್ದಾರೆ,' ಎಂದು ಬರೆದು, ತನಗೆ ಬರೆಯುವುದಕ್ಕೆ ಬರುವುದೆಂಬುದನ್ನು ಮೇರಿಯುಸ್ಸನಿಗೆ ತೋರಿಸುವುದಕ್ಕಾಗಿ ಅದನ್ನು ಎತ್ತಿ ಹಿಡಿದಳು. ಆಗ ಮೇರಿಯುಸ್ಸನಿಗೆ ಆ ಜಾಂಡ್ರೆಟ್ ಸಂಸಾರದ ವಿಷಯದಲ್ಲಿ ಉಂಟಾದ ಕನಿಕರದಿಂದ ಅವನು ತನ್ನಲ್ಲಿದ್ದ ಕಡೆಯ ಕಾಸು, ಐದು ಫ್ರಾಂಕುಗಳನ್ನು ಕೊಟ್ಟುಬಿಟ್ಟನು. ಈ ಬಡ ಕುಟುಂಬದವರಲ್ಲಿ ಇವನಿಗೆ ಕುತೂಹಲವು ಹುಟ್ಟಿತು. ಆ ಹುಡುಗಿಯು ಹೊರಟುಹೋದ ಮೇಲೆ ಅವನ ಕೊಠಡಿಯ ಗೋಡೆಯಲ್ಲಿ ಮೇಲ್ಗಡೆ ಒಂದು ರಂಧ್ರವಿದ್ದುದು ಕಣ್ಣಿಗೆ ಬಿತ್ತು. ಬೀರುವಿನ ಮೇಲೆ ಹತ್ತಿ ಆ ಜಾಂಡ್ರೆಟ್ ಸಂಸಾರದ ಕೊಠಡಿಯೊಳಗೆ ನೋಡಿದನು. ಅದು ಒಂದು ಭಯಂಕರವಾದ ಗವಿಯಂತೆ ಕಂಡಿತು. ಅಲ್ಲಿ ದೀಪದ ಬೆಳಕು ಬಹಳ ಮಂಕಾಗಿದ್ದುದಲ್ಲದೆ, ಒಡೆದ ತಟ್ಟೆಗಳೂ ಮುರಿದ ಮರದ ಸಾಮಾನುಗಳೂ ಅವ್ಯವಸ್ಥೆಯಾಗಿ ಅಲ್ಲಲ್ಲಿ ಬಿದ್ದಿದ್ದುವು. ಕೋಣೆಯಂತೂ ತುಂಬ ಹರಿಯುವಂತಿತ್ತು. ಕೆಡುಕರಂತೆ ಕಂಡ ಅಲ್ಲಿದ್ದ ಆ ಸಂಸಾರದ ತಾಯಿತಂದೆಗಳೂ, ನೋಡಲು ಇನ್ನೂ ಭಯಂಕರವಾಗಿದ್ದರು. ಅವರ ಸಂಭಾಷಣೆಯಿಂದ, ಯಾವನೋ ಒಬ್ಬ ಐಶ್ವರ್ಯವಂತನೂ, ಉದಾರಿಯೂ ಆದ ದೊಡ್ಡ ಮನುಷ್ಯನ ಆಗಮನವನ್ನು ಪ್ರತಿ ಕ್ಷಣದಲ್ಲಿಯೂ ನಿರೀಕ್ಷಿಸುತ್ತಿದ್ದಂತೆಯೂ, ಅವನ ಹೆಸರು ಮಾತ್ರ ಅವರಿಗೆ ಗೊತ್ತಿರಲಿಲ್ಲವೆಂತಲೂ ತೋರಿತು. ಬಾಗಿಲು ತೆರೆದು ಲೆಬ್ಲಾಂಕನೂ, ತಾನು 'ಅರಸೂಲ' ಎಂದು ಕರೆಯುತ್ತಿದ್ದ ಕೋಸೆಟ್ಟಳೂ ಒಳಗೆ ಬಂದಾಗ ಮೇರಿಯುಸ್ಸನು ಆಶ್ಚರ್ಯಪರವಶನಾದನು. ಕೋಸೆಟ್ಟಳು ಆ ಮನೆಯ ಯಜಮಾನಿಯೊಡನೆಯೂ ಹೆಣ್ಣು ಮಕ್ಕಳೊಡನೆಯೂ ಬಹಳ ದಯೆ

ಯಿಂದಲೂ ಕನಿಕರದಿಂದಲೂ ಮಾತನಾಡುತ್ತಿರುವಾಗ ಅವಳ ಪ್ರತಿಯೊಂದು ಭಾವವನ್ನೂ ಪ್ರತಿ ಕ್ಷಣದಲ್ಲಿಯೂ ಅವನು ಗಮನಿಸಿ ನೋಡುತ್ತಲಿದ್ದನು. ಜಾಂಡ್ರೆಟ್ಟನು ತನಗೆ ಆರು ತಿಂಗಳ ಬಾಡಿಗೆಯು ಮುಂಗಡವಾಗಿ ಬೇಕೆಂದು ಕೇಳಿದುದಕ್ಕೆ, ಅದರಂತೆ ಆ ದಿನ ಸಾಯಂಕಾಲದ ಆರು ಗಂಟೆಗೆ ತೆಗೆದುಕೊಂಡು ಬಂದು ಕೊಡುವುದಾಗಿ ಜೀನ್ ವಾಲ್ಜೀನನು ವಾಗ್ದಾನ ಮಾಡಿದುದನ್ನು ಮೇರಿಯಸ್ಸನು ಕೇಳಿದನು.

ಅವರು ಹೊರಟುಹೋದ ಸ್ವಲ್ಪ ಹೊತ್ತಿನಮೇಲೆ ಜಾಂಡ್ರೆಟ್ಟನ ಹುಡುಗಿಯರಲ್ಲಿ ಹಿರಿಯವಳು ಮೇರಿಯಸ್ಸನ ಕೊಠಡಿಯ ಬಾಗಿಲಿಗೆ ಬಂದು, 'ನೀನು ನಮಗೆ ಮಾಡಿದ ಉಪಕಾರಕ್ಕಾಗಿ ನಾನು ನಿನಗೆ ಯಾವ ಪ್ರತ್ಯುಪಕಾರವನ್ನು ಮಾಡಲಿ?' ಎಂದು ಕೇಳಿದಳು. ಅದಕ್ಕೆ ಅವನು, 'ಈಗ ತಾನೆ ಇಲ್ಲಿಗೆ ಬಂದಿದ್ದ ಮನುಷ್ಯನ ಮತ್ತು ಆ ಹುಡುಗಿಯ ನಿವಾಸದ ವಿಳಾಸವೇನೆಂಬುದನ್ನು ತಿಳಿದು ಹೇಳಬೇಕು,' ಎಂದು ಕೇಳಿಕೊಂಡನು.

ಕೆಲವು ನಿಮಿಷಗಳೊಳಗಾಗಿ, ಪಕ್ಕದ ಕೊಠಡಿಯಲ್ಲಿ ಒಳಕೂಗಾಟದ ಗದ್ದಲವು ಅವನಿಗೆ ಕೇಳಿಬಂತು. ಕಂಡಿಗೆ ಕಿವಿಯಿಟ್ಟು ಕೇಳುವಲ್ಲಿ ಜಾಂಡ್ರೆಟ್ ಸಂಸಾರದವರು ಆ ಸಾಯಂಕಾಲಕ್ಕೆ ಅಲ್ಲಿ ಬರತಕ್ಕ ಲೆಬ್ಲಾಂಕನಿಗೆ ವಿರೋಧವಾಗಿ ಏನೋ ಪಿತೂರಿಯನ್ನು ನಡೆಯಿಸುತ್ತಿರುವಂತೆ ತಿಳಿಯಿತು. ಜಾಂಡ್ರೆಟ್ಟನು ತನ್ನ ಸಹಾಯಕ್ಕೆ ಕೆಲವು ತುಂಟರನ್ನು ಹುಡುಕಿ ಕರೆತರಲು ಸ್ವಲ್ಪ ಹೊತ್ತಿನಲ್ಲಿಯೇ ಮನೆಯಿಂದ ಹೊರಟನು. ಮೇರಿಯಸ್ಸನು ಈ ವಿಷಯವನ್ನು ತಿಳಿಸುವುದಕ್ಕಾಗಿ ಪೊಲೀಸ್ ಸ್ಟೇಷನ್ನಿಗೆ ಹೋದನು. ವಿಷಯವನ್ನು ತಿಳಿಸಿ ಅವನು ಅಲ್ಲಿಂದ ಹೊರಟು ಬರುವಾಗ ಪೊಲೀಸ್ ಅಧಿಕಾರಿಯೊಬ್ಬನು (Inspector) ಮೇರಿಯಸ್ಸನಿಂದ ಬೀಗದ ಕೈಯನ್ನು ಕೇಳಿ ತೆಗೆದುಕೊಂಡು, ಅವನಿಗೆ ಎರಡು ಚಿಕ್ಕ ಉಕ್ಕಿನ ಕೈ ತುಪಾಕಿಗಳನ್ನು (pistols) ಕೊಟ್ಟು, 'ಇದೊ, ಇವುಗಳನ್ನು ತೆಗೆದುಕೊಂಡು ಹೋಗಿ ನೀನು

ನಿನ್ನ ಕೊಠಡಿಯಲ್ಲಿ ಅಡಗಿಕೊಂಡು, ಹೊರಗೆ ಹೊರಟುಹೋಗಿರುವೆಯೆಂಬದಾಗಿ ಅವರು ತಿಳಿದುಕೊಂಡಿರುವಂತೆ ಮಾಡು. ಈ ತುಪಾಕಿಗಳಿಗೆ ಮದ್ದು, ಗುಂಡುಗಳನ್ನು ಹಾಕಿದೆ; ಪ್ರತಿಯೊಂದರಲ್ಲಿಯೂ ಎರಡು ಗುಂಡುಗಳಿವೆ. ನೀನು ಅಲ್ಲಿ ನಡೆಯುವುದೆಲ್ಲವನ್ನೂ ಚೆನ್ನಾಗಿ ಗಮನಿಸಿ ನೋಡುತ್ತಿರು. ಗೋಡೆಯಲ್ಲಿ ಒಂದು ರಂಧ್ರವಿರುವುದೆಂದು ನೀನು ಹೇಳಿರುವೆಯಷ್ಟೆ! ಆ ತುಂಟರ ಗುಂಪು ಒಳಗೆ ಒರಲಿ. ಅವರು ಏನೇನು ಮಾಡುವರೋ ಸ್ವಲ್ಪ ನೋಡು. ವಿಷಯವು ಅಪಾಯ ಸ್ಥಿತಿಗೆ ಬಂದಂತೆ ತೋರಿ, ಅದನ್ನು ನಿಲ್ಲಿಸುವುದಕ್ಕೆ ಸಮಯವೆಂದು ನಿನಗೆ ಕಂಡುಬಂದಾಗ, ಒಂದು ಗುಂಡನ್ನು ಹಾರಿಸು; ಮೊದಲೇ ಹಾರಿಸಿ ಬಿಡಬೇಡ. ಉಳಿದುದನ್ನು ನಾನು ನೋಡಿಕೊಳ್ಳುವೆನು. ಆ ಗೋಲಿಯು ಏಟು ಆಕಾಶಕ್ಕೋ ಕೊಠಡಿಯ ಮಾಳಿಗೆಗೋ, ಎಲ್ಲಿಗೆ ಬೇಕಾದರೂ ಹೊಡಿ; ಮುಖ್ಯವಾಗಿ ಕೇವಲ ಮೊದಲೇ ಹೊಡೆದುಬಿಡಬೇಡ,' ಎಂದು ಉಪದೇಶಮಾಡಿದನು.

ಮೇರಿಯುಸ್ಸನು ಕೈ ತುಪಾಕಿಗಳನ್ನು ತೆಗೆದುಕೊಂಡು ತನ್ನ ಅಂಗಿಯ ಪಕ್ಕದ ಜೇಬಿನಲ್ಲಿಟ್ಟುಕೊಂಡು, 'ಸ್ವಾಮಿ, ತಾವು ಧೈರ್ಯವಾಗಿರಿ,' ಎಂದು ಹೇಳಿ, ಹೊರಗೆ ಹೋಗಲು ಕೈಯನ್ನು ಚಿಲಕದ ಮೇಲೆ ಇಟ್ಟ ಕೂಡಲೇ, ಪೊಲೀಸ್ ಅಧಿಕಾರಿಯು ಅವನನ್ನು ಕರೆದು, 'ಒಂದು ವೇಳೆ ಅಷ್ಟರೊಳಗಾಗಿಯೇ ನನ್ನ ಹಾಜರಿಯೇನಾದರೂ ಅವಶ್ಯಕವಾದರೆ ನೀನೇ ಹೊರಟು ಬಾ, ಅಥವಾ ಯಾರ ಸಂಗಡಲಾದರೂ ಇನ್‌ಸ್ಪೆಕ್ಟರ್ ಜೇವರ್ಟನಿಗೆ ಹೇಳಿಕಳುಹಿಸು,' ಎಂದು ಹೇಳಿದನು. ಮೇರಿಯುಸ್ಸನು ಹಿಂದಿರುಗಿ ತನ್ನ ಕೊಠಡಿಗೆ ಬಂದು, ಆರು ಗಂಟೆ ಹೊಡೆಯುವುದಕ್ಕೆ ಮುಂಚೆಯೇ, ಕೈಯಲ್ಲಿ ಪಿಸ್ತೂಲನ್ನು ಹಿಡಿದು, ಗೋಡೆಯಲ್ಲಿದ್ದ ರಂಧ್ರದ ಬಳಿಯಲ್ಲಿ ಅಡಗಿಕೊಂಡನು. ಅಗ್ಗಿಷ್ಟಿಕೆಯಲ್ಲಿ ಬೆಂಕಿಯು ಪ್ರಬಲವಾಗಿ ಉರಿಯುತ್ತಿರುವುದನ್ನೂ ಅದರಲ್ಲಿ ಒಂದು ಭಾರಿಯಾದ ಕಬ್ಬಿಣದ ಉಳಿಯನ್ನು ಕಾಯಲು ಹಾಕಿರುವುದನ್ನೂ

ಆವನು ನೋಡಿದನು. ಬೀದಿಯ ಎರಡು ಕಡೆಗಳಲ್ಲಿಯೂ ಎಚ್ಚರದಿಂದ ಕಾದಿರುವುದಕ್ಕಾಗಿ ಜಾಂಡ್ರೆಟ್ಟನು ತನ್ನ ಇಬ್ಬರು ಹೆಣ್ಣು ಮಕ್ಕಳನ್ನು ಬೇಗನೆ ಕಳುಹಿಸಿದನು. ಲೆಬ್ಲಾಂಕನು ಒಳಗೆ ಬಂದಾಗ ಜಾಂಡ್ರೆಟ್ಟನು ಅವನೊಡನೆ ಏನೋ ಪ್ರಸಂಗವನ್ನು ಹೂಡಿ ಮಾತಿಗೆ ಸಿಕ್ಕಿಸಿಕೊಂಡನು. ಪ್ರಾಣ ಭಯವನ್ನು ತೊರೆದ ನಾಲ್ಕು ಮಂದಿ ಕಟ್ಟಾಳುಗಳು ಆಗ ಒಳಗೆ ಪ್ರವೇಶಿಸಿ ಬಾಗಿಲ ಬಳಿಯಲ್ಲಿ ನಿಂತುಕೊಂಡರು. ಲೆಬ್ಲಾಂಕನು ಅವರು ಯಾರೆಂದು ಕೇಳುವ ಭಾವದಿಂದ ಅವರ ಕಡೆಗೆ ನೋಡಲು, ಜಾಂಡ್ರೆಟ್ಟನು, 'ಇವರು ನನ್ನ ಸ್ನೇಹಿತರು, ಇದ್ದರಿರಲಿ, ಅವರಿಂದ ನಿಮಗೇನಾದೀತು!' ಎಂದನು. ಹಠಾತ್ತಾಗಿ ಮತ್ತೆ ಮನೆಯ ಬಾಗಿಲು ತೆರೆಯಿತು. ಕಪ್ಪು ನಿಲುವಂಗಿಗಳನ್ನು ಧರಿಸಿ, ಮುಖಕ್ಕೆ ಕಪ್ಪು ಮುಖವಾಡಗಳನ್ನಿಟ್ಟುಕೊಂಡಿದ್ದ ಮೂವರು ಲೆಬ್ಲಾಂಕನ ಕಣ್ಣಿಗೆಬಿದ್ದರು.

ಲೆಬ್ಲಾಂಕನ ಮುಖವು ಕಳೆಗಟ್ಟಿತು. ತಾನು ಎಂತಹ ಸಂದರ್ಭದಲ್ಲಿ ಸಿಕ್ಕಿಬಿದ್ದಿರುವೆನೆಂದು ಅವನು ತಿಳಿದುಕೊಂಡು ತನ್ನ ಸುತ್ತಲೂ ಆ ಕೊಠಡಿಯಲ್ಲಿದ್ದ ಪ್ರತಿಯೊಂದು ಪದಾರ್ಥವನ್ನೂ ನೋಡಿದುದಲ್ಲದೆ, ಅಲ್ಲಿ ತನ್ನನ್ನು ಒಳಸಿ ನಿಂತಿದ್ದ ಎಲ್ಲರ ಕಡೆಗೂ ಕುತ್ತಿಗೆಯನ್ನು ತಿರುಗಿಸಿ ಚೆನ್ನಾಗಿ ಅವರ ಮುಖಗಳನ್ನು ನಿದಾನವಾಗಿ ನೋಡಿ ಆಶ್ಚರ್ಯಚಕಿತನಾದನು ಇಷ್ಟಾದರೂ ಅವನ ರೀತಿಯನ್ನು ನೋಡಿದರೆ, ಅವನಿಗೆ ಸ್ವಲ್ಪವೂ ಭಯವುಂಟಾದಂತೆ ಕಾಣಲಿಲ್ಲ. ಅವನ ಮನಸ್ಸಿಗೆ ಆಕಸ್ಮಿಕವಾಗಿ ಆಗ ಸ್ಫುರಿಸಿದ ಮೋರೆಗೆ, ಅವನು ಅಲ್ಲಿದ್ದ ಮೇಜನ್ನು ತನಗೆ ಅಡ್ಡವಾಗಿಟ್ಟುಕೊಂಡನು. ಒಂದು ಕ್ಷಣದ ಹಿಂದೆ ನೋಡುವುದಕ್ಕೆ ಬಲು ಮುದುಕನಂತೆ ಕಂಡ ಇವನು, ಈಗ ತಟ್ಟನೆ ಪ್ರಬಲನಾದ ಮಲ್ಲನಾಗಿ, ಅಸಾಧಾರಣವೂ ಭಯಂಕರವೂ ಆದ ಬಹು ಕ್ರೂರ ಸಂಜ್ಞೆಯಿಂದ ತನ್ನ ಬಲವಾದ ಮುಷ್ಟಿಯನ್ನು ಕುರ್ಚಿಯ ಬೆನ್ನು ಕಡೆಯಲ್ಲಿಟ್ಟುಕೊಂಡು ನಿಂತನು.

ಇಂತಹ ಪ್ರಬಲ ವಿಪತ್ತಿನಲ್ಲಿಯೂ ಇಷ್ಟು ಸ್ಥಿರವಾಗಿಯೂ

ಧೀರನಾಗಿಯೂ ನಿಂತಿದ್ದ ಈ ಮುದುಕನು, ಜಗತ್ತಿನಲ್ಲಿ ಸ್ವಾಭಾವಿಕವಾಗಿ ಉತ್ತಮವಾಗಿಯೂ ಲಲಿತವಾಗಿಯೂ ಧೈರ್ಯಾತಿಶಯದಿಂದಲೂ ಕಂಗೊಳಿಸುವ ಒಂದು ಪ್ರಕೃತಿ ಶಕ್ತಿಯಂತೆ ಕಂಡನು. ಈ ಹೊಸಬನ ರೀತಿಯನ್ನು ನೋಡಿ ಮೇರಿಯುಸ್ಸನಿಗೆ ಮನಸ್ಸಿನಲ್ಲಿ ಒಂದು ವಿಧವಾದ ಸಂತೋಷದ ಹೆಮ್ಮೆ ಹುಟ್ಟಿತು.

ಇನ್ನು ಒಂದೆರಡು ಕ್ಷಣಗಳಲ್ಲಿಯೇ ತಾನು ಈ ಸಂದರ್ಭದಲ್ಲಿ ಪ್ರವೇಶಿಸಬೇಕಾದ ಸಮಯವು ಬರುವುದೆಂದಾಲೋಚಿಸಿ, ಅವನು ತನ್ನ ಬಲಗೈಯನ್ನು ಆ ದೊಡ್ಡ ಕೊಠಡಿಯ ಮಾಳಿಗೆಯ ಕಡೆ ಎತ್ತಿ ತುಪಾಕಿಯನ್ನು ಹಾರಿಸಲು ಸಿದ್ಧನಾದನು.

ಆಗ ಜಾಂಡ್ರೆಟ್ಟನು, ತನ್ನನ್ನು ನೋಡಲು ಬಂದಿದ್ದ ಆ ಮುದುಕನನ್ನು ನೋಡಿ, 'ನಿನಗೆ ನನ್ನ ಗುರುತು ಸಿಕ್ಕಲಿಲ್ಲವೇ?' ಎಂದನು.

ಲೆಬ್ಲಾಂಕನು ಅವನ ಮುಖವನ್ನು ಚೆನ್ನಾಗಿ ನೋಡಿ, 'ಇಲ್ಲ,' ಎಂದು ಉತ್ತರಕೊಟ್ಟನು.

ಜಾಂಡ್ರೆಟ್ಟನು ಮೇಜಿನ ಬಳಿಗೆ ಬಂದು, 'ನನ್ನ ಹೆಸರು ಜಾಂಡ್ರೆಟ್ಟನಲ್ಲ, ನನ್ನ ಹೆಸರು ಥೆನಾರ್ಡಿಯರ್! ನಿನಗೆ ಈಗಲಾದರೂ ನನ್ನ ಪರಿಚಯವಾಯಿತೆ?' ಎಂದು ಗಟ್ಟಿಯಾಗಿ ಕೂಗಿದನು. ಲೆಬ್ಲಾಂಕನ ಹಣೆಯ ಮೇಲೆ ಸೂಕ್ಷ್ಮವಾದ ಒಂದು ಕೆಂಪು ಛಾಯೆಯೇರಿತು. ಆಗ ಅವನು ಸ್ವಲ್ಪವೂ ಅದಿರಿ ಬೆದರದೆ, ಗಟ್ಟಿಯಾಗಿ ಕೂಗದೆ, ತನ್ನ ಸ್ವಭಾವಿಕವಾದ ಶಾಂತ ರೀತಿಯಿಂದ, 'ಹೆಚ್ಚು ಪರಿಚಯವೇನೂ ಆಗಲಿಲ್ಲ,' ಎಂದನು.

ಮೇರಿಯುಸ್ಸನಿಗೆ ಈ ಉತ್ತರವು ಕೇಳಿಸಲಿಲ್ಲ. ಅವನನ್ನು ಆ ಸಮಯದಲ್ಲಿ ಯಾರಾದರೂ ನೋಡಿದ್ದಲ್ಲಿ ಅವನು ಎಷ್ಟು ಬೆದರಿ, ಬೆಚ್ಚಿ, ದಿಕ್ಕುತೋರದೆ ಇದ್ದನೆಂಬುದು ಕಾಣುತ್ತಿತ್ತು. ಅವನ ಬೆರಳಿನ ನರಗಳೇ ಅವನ ಸ್ವಾಧೀನ ತಪ್ಪಿ, ತುಪಾಕಿಯು ಕೈಯಿಂದ ಕಳಚಿ ಬೀಳುವಂತಾಯಿತು. ಲೆಬ್ಲಾಂಕನಿಗೆ ಅಪರಿಚಿತವಾಗಿ ಕಂಡ 'ಥೆನಾರ್ಡಿಯರ್' ಎಂಬ ಹೆಸರು ಮೇರಿಯುಸ್ಸನಿಗೆ ತನ್ನ ತಂದೆಯು

ಬರೆದಿದ್ದ ಆಜ್ಞೆಯ ಮೂಲಕವಾಗಿ, ಎಂದರೆ 'ಥೆನಾರ್ಡಿಯರ್ ಎಂಬ ಮನುಷ್ಯನು ನನ್ನ ಪ್ರಾಣವನ್ನುಳಿಸಿದನು. ನನ್ನ ಮಗನು ಆತನನ್ನು ಸಂಧಿಸಿದುದೇ ಆದರೆ ಆತನಿಗೆ ಅವನ ಕೈಯಿಂದಾದಷ್ಟು ಉಪಕಾರವನ್ನು ಮಾಡಲಿ,' ಎಂದು ಬರೆದಿದ್ದ ಆಜ್ಞಾಪತ್ರದ ಮುಖದಿಂದ, ತಿಳಿದಿತ್ತು.

ಥೆನಾರ್ಡಿಯರನ ದುಷ್ಕಾರ್ಯಕ್ಕೆ ಸಹಾಯಕರಾಗಿ ಬಂದಿದ್ದವರಲ್ಲಿ ಒಬ್ಬನು ಬಾಗಿಲ ಕಡೆಯಿಂದ ಅವನ ಬಳಿಗೆ ಬರಲು, ಈವನಿಗೆ ಉತ್ತರ ಕೊಡುವುದಕ್ಕಾಗಿ ಥೆನಾರ್ಡಿಯರನು ಲೆಬ್ಲಾಂಕನ ಕಡೆಗೆ ತನ್ನ ಬೆನ್ನನ್ನು ತಿರುಗಿಸಿದನು. ಇದೇ ಸಮಯವೆಂದು ಲೆಬ್ಲಾಂಕನು ಕಾಲಿನಿಂದ ಕುರ್ಚಿಯನ್ನೂ ಕೈಯಿಂದ ಮೇಜನ್ನೂ ನೂಕಿಬಿಟ್ಟು, ಥೆನಾರ್ಡಿಯರನು ಹಿಂದಿರುಗುವುದರೊಳಗಾಗಿ, ಪರಮಾಶ್ಚರ್ಯಕರವಾದ ಚಳಕದಿಂದ ಕಿಟಿಕಿಯ ಬಳಿಗೆ ನೆಗೆದನು. ಒಂದು ಕ್ಷಣದೊಳಗಾಗಿ ಕಿಟಿಕಿಯನ್ನು ತೆರೆದು, ಹತ್ತಿ, ಅಲ್ಲಿಂದ ಹೊರಗೆ ಇಳಿದನು. ಅವನು ಅರ್ಧ ಹೊರಗೆ ಹೋಗಿರುವಷ್ಟರಲ್ಲಿ, ಮೂವರು ಬಲವಾದ ಆಳುಗಳು ತಮ್ಮ ಆರು ತೋಳುಗಳಿಂದ ಅವನನ್ನು ಬಲವಾಗಿ ಹಿಡಿದು ಕೊಠಡಿಯೊಳಕ್ಕೆ ಎಳೆದುಕೊಂಡರು. ಆ ಮೂರು ಮಂದಿ ಕರಿಯ ಮುಖವಾಡದ ಆಳುಗಳೂ ಅವನ ಮೇಲೆ ಬಿದ್ದರು. ಇದೇ ಕಾಲದಲ್ಲಿ ಥೆನಾರ್ಡಿಯರನ ಹೆಂಡತಿಯು ಅವನ ಜುಟ್ಟನ್ನು ಬಲವಾಗಿ ಹಿಡಿದುಕೊಂಡಳು. ಈ ಗದ್ದಲವನ್ನು ಕೇಳಿ ಮಿಕ್ಕ ದುಷ್ಟರು ಆ ಕೊಠಡಿಯೊಳಕ್ಕೆ ಓಡಿ ಬಂದರು.

ಅವರಲ್ಲಿ ಒಬ್ಬನು, ಕಬ್ಬಿಣದ ಕಂಬಿಗೆ ಎರಡು ಕೊನೆಗಳಲ್ಲಿಯೂ ಸೀಸದ ಗುಂಡನ್ನು ಸೇರಿಸಿ ಮಾಡಿದ್ದ ಒಂದು ಬಲವಾದ ಗದೆಯನ್ನು ಎತ್ತಿ ಮಾನ್ಸಿಯುರ್ ಲೆಬ್ಲಾಂಕನ ತಲೆಯ ಮೇಲೆ ಹೊಡೆಯಲು ಎತ್ತಿದನು.

ಮೇರಿಯಸ್ಸನು ಈ ದೃಶ್ಯವನ್ನು ನೋಡಿ ಸಹಿಸಲಾರದೆ, ತನ್ನಲ್ಲಿ ತಾನು 'ತಂದೆ, ನನ್ನನ್ನು ಮನ್ನಿಸು,' ಎಂದು ಮನಸ್ಸಿ

ನಲ್ಲಿ ಆಲೋಚಿಸಿಕೊಂಡು, ತುಪಾಕಿಯ ಕುದುರೆಯನ್ನು ಮಿಾಟಲು ಬೆರಳನ್ನಿಟ್ಟನು. ಗುಂಡನ್ನು ಹಾರಿಸುವಷ್ಟರಲ್ಲಿ, 'ಅವನಿಗೆ ತೊಂದರೆ ಮಾಡಬೇಡಿ,' ಎಂದ ಥೆನಾರ್ಡಿಯರನ ಧ್ವನಿಯು ಕೇಳಿಬಂದಿತು.

ಈ ಕೂಗು ಕೇಳಿದೊಡನೆಯೇ ಮೇರಿಯಸ್ಸನು ಇನ್ನೂ ಸ್ವಲ್ಪ ಹೊತ್ತು ನಿರೀಕ್ಷಿಸೋಣವೆಂದು ನಿರ್ಧರಿಸಿಕೊಂಡನು.

ಒಂದು ಮಹಾ ರಾಕ್ಷಸ ಮಲ್ಲಯುದ್ಧವೇ ಪ್ರಾರಂಭ ವಾಯಿತು. ಲೆಬ್ಲಾಂಕನು ಅವರಲ್ಲೊಬ್ಬನ ಎದೆಗೆ ಕೊಟ್ಟ ಬಲವಾದ ಏಟಿನಿಂದ ಅವನು ಆ ಕೊಠಡಿಯ ಮಧ್ಯ ಭಾಗಕ್ಕೆ ಉರುಳುರುಳಿ ಹೋಗಿ, ಬೋರಲು ಬಿದ್ದನು. ಅನಂತರ ಹಿಂದಕ್ಕೆ ಎರಡು ಏಟುಗಳನ್ನು ಹೊಡೆಯಲು, ಇನ್ನಿಬ್ಬರು ತುಂಟರು ಬಿದ್ದರು. ಲೆಬ್ಲಾಂಕನು ಒಬ್ಬೊಬ್ಬನನ್ನು ತನ್ನ ಒಂದೊಂದು ಮೊಣಕಾಲಿನ ಸಂದಿಗೆ ಇರುಕಿಸಿ ಅವರಿಬ್ಬರನ್ನೂ ಹಿಡಿದುಕೊಂಡನು. ಆ ನೀಚ ರಿಬ್ಬರೂ, ಕಲ್ಲನ್ನು ಪುಡಿಮಾಡುವ ಯಂತ್ರಕ್ಕೆ ಸಿಕ್ಕಿದವರಂತೆ, ಅವನ ಬಲವಾದ ಹಿಡಿತವನ್ನು ತಡೆಯಲಾರದೆ ಅರಚಿ ಕಿರಚಿ ಕೊಂಡರು. ಆದರೆ ಇನ್ನೂ ನಾಲ್ಕು ಮಂದಿ ಬಂದು, ಆ ಭಯಂಕರ ನಾದ ಮುದುಕನ ತೋಳುಗಳನ್ನೂ ಬೆನ್ನನ್ನೂ ಹಿಡಿದು ಬೋರಲಾಗಿ ಬಿದ್ದಿದ್ದ ಇಬ್ಬರು 'ಕರಿಯ ಭಟರ' ಮೇಲ್ಗಡೆ ಯಲ್ಲಿ ಅದಿಮಿ ಹಿಡಿದಿದ್ದರು. ಲೆಬ್ಲಾಂಕನು ತನ್ನ ಕೆಳಗಿರು ವವರನ್ನು ತುಳಿದು ಜಜ್ಜುತ್ತಲೂ, ತನ್ನ ಮೇಲೆ ಬಿದ್ದಿರುವವರ ಕೆಳಗೆ ಸಿಕ್ಕಿ ಉಸಿರಾಡಲು ಸಹ ಸಾಧ್ಯವಿಲ್ಲದೆಯೂ, ಮಳೆಯಂತೆ ಮೇಲೆ ಬೀಳುತ್ತಿದ್ದ ಜನರ ತುಳಿತವನ್ನು ನಿವಾರಿಸಿಕೊಳ್ಳಲು ಬಹಳ ಪ್ರಯತ್ನಮಾಡಿ ಸಾಧ್ಯವಿಲ್ಲದೆಯೂ, ಕಡೆಗೆ, ಬೊಗಳುವ ಬೇಟೆ ನಾಯಿಗಳ ಮಧ್ಯದಲ್ಲಿ ಸಿಕ್ಕಿಬಿದ್ದ ಕಾಡು ಕರಡಿಯಂತೆ ಆ ದುಷ್ಟರಾದ ಕಳ್ಳರ ಭಯಂಕರವಾದ ಗುಂಪಿನೊಳಗೆ ಸಿಕ್ಕಿ ಮಾಯವಾಗಿದ್ದನು.

ಅವರು ಕಟ್ಟಕಡೆಗೆ ಅವನನ್ನು ಹಿಡಿದು, ಕಿಟಕಿಯ ಬಳಿ

ಯಲ್ಲಿದ್ದ ಒಂದು ಹಾಸುಗೆಯ ಮೇಲಕ್ಕೆ ಎಸೆದು ಅಲ್ಲಿ ಬಲವಾಗಿ ಹಿಡಿದು ನಿಲ್ಲಿಸಿಕೊಂಡರು.

ಥೆನಾರ್ಡಿಯರನು ಬಾಗಿಲಿನಿಂದ ಒಂದು ಮೂಲೆಗೆ ಹೋಗಿ ಹಗ್ಗದ ಕಟ್ಟೊಂದನ್ನು ತೆಗೆದು ಅವರ ಕಡೆಗೆ ಎಸೆದು, 'ಆ ಮಂಚದ ಕಾಲಿಗೆ ಅವನನ್ನು ಬಿಗಿದು ಕಟ್ಟಿರಿ,' ಎಂದು ಕೂಗಿದನು. ಆ ದುಷ್ಟರು ಅವನನ್ನು ಹಿಡಿದು, ಕಿಟಿಕಿಗೆ ದೂರವಾಗಿಯೂ ಚಿಮನಿಗೆ ಸಮೀಪವಾಗಿಯೂ ಇರುವ ಮಂಚದ ಕಂಬಕ್ಕೆ ಅವನನ್ನು ಒರಗಿಸಿ ನೆಲದಮೇಲೆ ನಿಲ್ಲಿಸಿ, ಬಲವಾಗಿ ಬಿಗಿದು ಕಟ್ಟಿದರು.



ಅವರು ಲೆಬ್ಲಾಂಕನನ್ನು ಹಗ್ಗದಿಂದ ಬಿಗಿದು ಕಟ್ಟಿ ಪೂರಯಿಸಿದ ಕೂಡಲೆ ಥೆನಾರ್ಡಿಯರನು ಒಂದು ಕುರ್ಚಿಯನ್ನೆತ್ತಿಕೊಂಡು ಬಂದು ಅವನ ಎದುರಲ್ಲಿ ಕುಳಿತು, 'ಮಾನ್‌ಸಿಯುರ್', ನೀನು ಕಿಟಕಿಯಿಂದ ಹೊರಕ್ಕೆ ಧುಮ್ಮಿಕ್ಕಿ ಹೋಗಲು ಪ್ರಯತ್ನಿಸಿದುದು ತಪ್ಪು. ನಿನ್ನ ಕೈ ಕಾಲು ಮುರಿಯುತ್ತಿತ್ತು. ಅದು ಹೋಗಲಿ, ನಿನಗೆ ಸಮ್ಮತವಾದರೆ ಈಗ ನಾವು ನಿದಾನವಾಗಿ ಮಾತನಾಡೋಣ. ಮೊದಲನೆಯದಾಗಿ, ನಾನು ಗಮನಿಸಿರುವ ಒಂದು ಸಂದರ್ಭವನ್ನು ಈಗ ನಿನಗೆ ತಿಳಿಸಬೇಕಾಗಿದೆ. ಕೇಳು: ನೀನು ಈವರೆಗೂ ಸ್ವಲ್ಪವೂ ಕೂಗಿ ಗದ್ದಲ ಮಾಡದೆ ಇರುವುದೇ ಮುಖ್ಯ ವಿಚಾರ; ಇದರಿಂದ ನನಗೆ ತೋರುವ ಊಹೆಯೇನೆನ್ನುವೆಯೋ? ಯಾರಾದರೂ ಕೂಗಿಕೊಂಡರೆ ಅಲ್ಲಿಗೆ ಬರತಕ್ಕವರು ಯಾರು? ಪೊಲೀಸಿನವರು. ಅವರ ಹಿಂದೆ? ನ್ಯಾಯಾಧೀಶನು. ನೀನೇನೋ ಕೂಗಿಕೊಳ್ಳಲಿಲ್ಲ. ನ್ಯಾಯಾಧೀಶನೂ ಪೊಲೀಸಿನವರೂ ಬರಬೇಕೆಂಬ ಆತುರವು ನಮಗೆ ಹೇಗೆ ಇಲ್ಲವೋ ಅದರಂತೆ ನಿನಗೂ ಇಲ್ಲವೆಂಬುದನ್ನು ನಾನು ಕಂಡುಕೊಂಡೆ. ಹೇಗೆಂದರೆ, ಯಾವುದೋ ವಿಷಯವನ್ನು ನೀನು ಬಹು ಗೋಪ್ಯವಾಗಿ ಇಟ್ಟಿರುವುದರಲ್ಲಿ ತುಂಬ ಆಸಕ್ತನಾಗಿರುವಂತೆ ನನಗೆ ಬಹಳ ಕಾಲದ ಹಿಂದೆಯೇ ಸಂದೇಹ ಹುಟ್ಟಿತ್ತು. ನಾವಾದರೂ ಅದೇ ರೀತಿಯಾಗಿರುವೆವು. ಇದರಿಂದ ನಾವು ನಮ್ಮ ನಮ್ಮಲ್ಲಿ ಈ ಒಂದು ಒಡಂಬಡಿಕೆಯನ್ನು ಮಾಡಿಕೊಳ್ಳೋಣ,' ಎಂದು ಹೇಳಿದನು.

ಹೀಗೆಂದು ಹೇಳಿ, ಥೆನಾರ್ಡಿಯರನು ಎದ್ದು, ಅಗ್ಗಿಷ್ಟಿಗೆಯ ಬಳಿಗೆ ಬಂದು, ಅದರಲ್ಲಿ ಧಗಧಗನೆ ಉರಿಯುತ್ತಿದ್ದ ಕೆಂಡಗಳೂ ಅವುಗಳ ನಡುವೆ ಕೆಂಪಗೆ ಕಾದು ಪ್ರಜ್ವಲಿಸುತ್ತಿದ್ದ ಉಕ್ಕಿನ ಉಳಿಯೂ ಜೀನ್ ವಾಲ್ಜೀನನ ಕಣ್ಣಿಗೆ ಬೀಳುವಂತೆ, ನಡುವೆಯಿದ್ದ ಫರದೆಯನ್ನು ಎಳೆದು, ಮತ್ತೆ ಹಿಂದಕ್ಕೆ ಬಂದು ಮಾತನಾಡಲಾರಂಭಿಸಿದನು.

'ಈಗ ನಾನು ನಿನ್ನಿಂದ ಅಪೇಕ್ಷಿಸುತ್ತಿರುವುದು ಎರಡು ಲಕ್ಷ ಫ್ರಾಂಕುಗಳು ಮಾತ್ರವೇ. ಆದರೆ ಮೊದಲು ನಿನ್ನ ಮಗಳನ್ನು ಇಲ್ಲಿಗೆ ಕರೆಯಿಸುವುದು ಅತ್ಯಾವಶ್ಯಕವಾಗಿದೆ. ನಾನು ಈಗ ನಿನಗೆ ಹೇಳುವುದು ಒಂದೇ ಮಾತು ; ನಾನು ಹೇಳಿದಂತೆ ದಯವಿಟ್ಟು ಬರೆ,' ಎಂದನು.

ಅದಕ್ಕೆ ಆ ಬಂದಿಯು, 'ನಾನು ಬರೆಯುವುದು ಹೇಗೆ? ನನ್ನನ್ನು ಬಿಗಿದುಬಿಟ್ಟಿರುವರಲ್ಲಾ,' ಎಂದನು. 'ನಿಜ, ಕ್ಷಮಿಸು.' ಎಂದು, ಥೆನಾರ್ಡಿಯರನು ತನ್ನ ಕಡೆಯವನೊಬ್ಬನನ್ನು ನೋಡಿ, 'ಈ ಮಾನ್‌ಸಿಯುರನ ಬಲತೋಳನ್ನು ಬಿಚ್ಚು,' ಎಂದು ಆಜ್ಞೆ ಮಾಡಿದನು. ಬಿಚ್ಚಿದುದಾದ ಮೇಲೆ, ಅವನು ಲೆಬ್ಲಾಂಕನಿಗೆ ಈ ಮುಂದೆ ಕಾಣುವ ಮೇರೆಗೆ ಹೇಳಿ ಅವನಿಂದ ಪತ್ರವನ್ನು ಬರೆಯಿಸಿದನು :

'ಪ್ರಿಯ ಪುತ್ರೀ,

'ನೀನು ಕೂಡಲೆ ಹೊರಟು ಬರುವುದು. ನಿನ್ನ ಆಗಮನವು ಈಗ ನನಗೆ ಅತ್ಯಾವಶ್ಯಕವಾಗಿದೆ. ಈ ಕಾಗದವನ್ನು ತರುವ ಮನುಷ್ಯನು ನಿನ್ನನ್ನು ನನ್ನ ಬಳಿಗೆ ಕರೆತರುವಂತೆ ನನ್ನಿಂದ ಆಜ್ಞೆಯನ್ನು ಪಡೆದು ಬಂದಿದ್ದಾನೆ. ನಾನು ನಿನಗಾಗಿ ಕಾದಿದ್ದೇನೆ.

ಅರ್‌ಬೆಯಿನ್ ಫೇಬರ್.'

ಅನಂತರ ಲೆಬ್ಲಾಂಕನು ರೂ ಸೈಂಟ್ ಡಾಮಿನಿಕ್ ಡಿ'ಎನ್‌ಫರ್ ಬೀದಿಯಲ್ಲಿ, ೧೭ನೆಯ ಸಂಖ್ಯೆಯ, ಮಾನ್‌ಸಿಯುರ್ ಅರ್‌ಬೆಯಿನ್ ಫೇಬರ್ ಎಂಬಾತನ ಮನೆಯಲ್ಲಿರುವ ಮೇಡಮಾಯಿಸೆಲ್ ಫೇಬರಳ ಹೆಸರಿಗೆ ವಿಳಾಸವನ್ನು ಬರೆದನು.

ಥೆನಾರ್ಡಿಯರನು ಅತ್ಯಂತ ಆತುರದಿಂದ ಕಾಗದವನ್ನು ಅವನ ಕೈಯಿಂದ ಎಳೆದುಕೊಂಡು ತನ್ನ ಹೆಂಡತಿಗೆ ಕೊಟ್ಟು, 'ಇದೋ ಕಾಗದ, ಇದನ್ನು ತೆಗೆದುಕೊ, ಮುಂದೆ ಏನು ಮಾಡಬೇಕೆಂಬುದು ನಿನಗೆ ಗೊತ್ತಿರುವುದಷ್ಟೆ! ಮನೆಯ ಮೆಟ್ಟಲಿನ ಬಳಿಯಲ್ಲಿ

ಬಂಡಿಯು ಸಿದ್ಧವಾಗಿದೆ. ನೆಟ್ಟನೆ ಹೊರಟುಹೋಗಿ, ಹಾಗೆಯೇ ತಟ್ಟನೆ ಹೊರಟು ಬಾ,' ಎಂದು ಹೇಳಿದನು.

ಕೆಲವು ನಿಮಿಷಗಳಾದ ಮೇಲೆ ಬಂಡಿಯು ದೂರವಾಗಿ ಹೋಗುತ್ತಿರುವಾಗ ಕುದುರೆಗಳನ್ನು ಹೊಡೆಯುವ ಕೋರಡದ ಶಬ್ದವು ಅವರಿಗೆ ಕೇಳಿಸಿತು. ಈಗ ಆ ಮನೆಯಲ್ಲಿ ಎಲ್ಲವೂ ಮಂಕಾಗಿಯೂ ನಿಶ್ಶಬ್ದವಾಗಿಯೂ ಇತ್ತು. ಸುಮಾರು ಅರ್ಧ ಗಂಟೆಯ ಕಾಲ ಹೀಗೆಯೇ ಕಳೆಯಿತು. ಬಂದಿಯಾಗಿದ್ದವನು ಅಲ್ಲಾಡಲಿಲ್ಲ. ಆದರೂ ಆಗಾಗ ಕೆಲವು ನಿಮಿಷಗಳ ಕಾಲ, ಈ ಬಂಧಿತನಾಗಿದ್ದವನ ಕಡೆಯಿಂದ ಏನೋ ಸಣ್ಣ ಶಬ್ದವು ಬರುತ್ತಿದ್ದಂತೆ ಮೇರಿಯುಸ್ಸನ ಮನಸ್ಸಿಗೆ ತೋರಿತು.

ಹಠಾತ್ತಾಗಿ, ಥೆನಾರ್ಡಿಯರನ ಹೆಂಡತಿಯು ಹಿಂದಿರುಗಿ, ಸಿಟ್ಟಿದ್ದು ಬೆಂಕಿಬೆಂಕಿಯಾಗಿ, ಕೊಠಡಿಯೊಳಕ್ಕೆ ನುಗ್ಗಿ ಬಂದು, 'ಇವನು ನಿನಗೆ ಸುಳ್ಳು ವಿಳಾಸವನ್ನು ತಿಳಿಸಿದ್ದಾನೆ. ೧೭ನೆಯ ನಂಬರಿನ ಮನೆಯಲ್ಲಿ "ಮಾನ್‌ಸಿಯುರ್ ಫೇಬರ್" ಎಂಬಾತನು ಇಲ್ಲ. ನಾನು ಅಲ್ಲಿಯ ಬಾಗಿಲು ಕಾಯುವ ಗಂಡಾಳನ್ನೂ ಹೆಣ್ಣಾಳನ್ನೂ ಕೇಳಿ ಬಂದೆನು. ಯಾರಿಗೂ ಅವನ ವಿಚಾರವೇ ಗೊತ್ತಿಲ್ಲ,' ಎಂದು ಆರ್ಭಟಿಸಿದಳು.

ಥೆನಾರ್ಡಿಯರನು ಮೇಜಿನ ಮೇಲೆ ಕುಳಿತು, ಒಂದೆರಡು ಕ್ಷಣಗಳ ಕಾಲ ಒಂದು ಮಾತನ್ನೂ ಆಡದೆ, ತನ್ನ ಬಲಗಾಲನ್ನು ತೂಗಾಡಿಸುತ್ತ, ಮಹಾ ಕಠೋರವಾದ ಆಲೋಚನೆಯ ಕ್ರೂರ ದೃಷ್ಟಿಯಿಂದ ಅಗ್ಗಿಷ್ಟಿಗೆಯನ್ನೇ ದುರದುರನೆ ನೋಡುತ್ತಿದ್ದನು.

ಕಟ್ಟಕಡೆಗೆ ಆ ಬಂದಿಯನ್ನು ನೋಡಿ, ನಿದಾನವಾಗಿ, ವಿಚಿತ್ರ ತರವಾದ ಭಯಂಕರ ಮುಖಭಾವದಿಂದ, 'ಸುಳ್ಳು ವಿಳಾಸ! ಅದರಿಂದ ನಿನಗೇನು ಪ್ರಯೋಜನವೆಂದು ಭಾವಿಸಿದೆ?' ಎಂದು ಕೇಳಿದನು.

'ಸ್ವಲ್ಪ ಕಾಲವು ತಳ್ಳಲಿ ಎಂಬದಾಗಿ,' ಎಂದು ಆ ಬಂದಿಯು ಘಂಟೆ ಬಡಿದಂತೆ ನುಡಿದು, ಆ ಕ್ಷಣವೇ ತನ್ನ ಕಟ್ಟುಗಳನ್ನು

ಅಲ್ಲಾಡಿಸಿ ಒದರಲು, ಅವೆಲ್ಲವೂ ಪಟಪಟನೆ ಹರಿದುಹೋದವು. ಒಂದು ಕಾಲು ಹೊರತು ಅವನ ಶರೀರದ ಯಾವ ಭಾಗವೂ ಮಂಚದ ಕಂಬಕ್ಕೆ ಬಂಧಿತವಾಗಿರಲಿಲ್ಲ.

ಅಲ್ಲಿದ್ದ ಏಳು ಮಂದಿಯೂ ಚೇತರಿಸಿಕೊಂಡೆದ್ದು ಇವನ ಮೇಲೆ ಬೀಳುವುದಕ್ಕೆ ಮೊದಲೇ, ಇವನು ಅಗ್ಗಿಷ್ಟಿಗೆಯ ಕಡೆಗೆ ಬಾಗಿ, ಕೈಯನ್ನು ಬೆಂಕಿಯ ಬಳಿಗೆ ಚಾಚಿ, ಮೇಲಕ್ಕೆ ಎದ್ದನು. ಈಗ ಥೆನಾರ್ಡಿಯರನೂ ಅವನ ಹೆಂಡತಿಯೂ, ಆ ಪಟಿಂಗರೂ ಧಕ್ಕೆಬಡಿದವರಂತೆ ಹಿಮ್ಮೆಟ್ಟಿದರು; ಅವನು ಪ್ರಜ್ವಲಿಸುತ್ತಿದ್ದ ಆ ಉಳಿಯನ್ನು ತನ್ನ ತಲೆಯ ಮೇಲಕ್ಕೆ ಎತ್ತಿ ಹಿಡಿದಿದ್ದುದನ್ನೂ, ಅದು ಅಪಾಯ ಸೂಚಕವಾಗಿಯೂ ಭಯಂಕರವಾಗಿಯೂ ಪ್ರಜ್ವಲಿಸುತ್ತಿದ್ದುದನ್ನೂ ನೋಡಿ ಅವರು ಪ್ರಜ್ಞೆತಪ್ಪಿದವರಂತೆ ಸ್ತಬ್ಧರಾದರು.

ಇದಾದ ಮೇಲೆ, ಮುಂದೆ ನಡೆದ ವಿಚಾರಣೆಯ ಸಂದರ್ಭದಲ್ಲಿ, ಕತ್ತರಿಸಿದ್ದ ಒಂದು ದೊಡ್ಡ ಸೌ ನಾಣ್ಯವು ಆ ಕೊಠಡಿಯಲ್ಲಿ ಬಿದ್ದಿದ್ದುದು ಸಿಕ್ಕಿತು. ಇದಕ್ಕೆ ಒಂದು ವಿಚಿತ್ರ ರೀತಿಯಿಂದ ಕೆಲಸಮಾಡಿತ್ತು. ಪೊಲೀಸಿನವರ ದೃಷ್ಟಿಯು ಇದರ ಮೇಲೆ ಬೀಳಲು ಅವರು ಅದನ್ನು ತೆಗೆದು ಪರೀಕ್ಷಿಸಿದರು. ಈ ದೊಡ್ಡ ನಾಣ್ಯವು ಟೊಳ್ಳಾಗಿತ್ತು. ಇದರಲ್ಲಿ ನೀಲ ಬಣ್ಣದ ಉಕ್ಕಿನ ಸಣ್ಣ ಗರಗಸವಿತ್ತು. ಇದರಿಂದಲೇ ಲೆಬ್ಲಾಂಕನು ತನ್ನ ಕಟ್ಟುಗಳನ್ನು ಕತ್ತರಿಸಿದುದು. ಮೇರಿಯಸ್ಸನಿಗೆ ಹಿಂದೆ ಕೇಳಿಸಿದ್ದ ಸಣ್ಣ ಶಬ್ದವೇ ಮೊದಲಾದ ಅಗೋಚರ ವಿಷಯಗಳು ಏತರಿಂದ ಉಂಟಾಗಿದ್ದುವೆಂಬುದು ಇದರಿಂದ ಸ್ಪಷ್ಟವಾದುವು. ತನ್ನ ಗುಟ್ಟು ಬಯಲಾದೀತೆಂಬ ಭಯದಿಂದ ಕೆಳಗೆ ಬಾಗಲಾರದೆ ಅವನು ಎಡಗಾಲಿನ ಕಟ್ಟುಗಳನ್ನು ಕತ್ತರಿಸಿರಲಿಲ್ಲ.

ಮೊದಲು ಆಶ್ಚರ್ಯಚಕಿತರಾಗಿದ್ದ ಪಟಿಂಗರು ಚೇತರಿಸಿಕೊಂಡೆದ್ದರು. ಆಗ ಅವರಲ್ಲಿ ಒಬ್ಬನು, ಥೆನಾರ್ಡಿಯರನನ್ನು ನೋಡಿ, 'ಧೈರ್ಯವಾಗಿರಿ, ಅವನ ಒಂದು ಕಾಲಿನ ಕಟ್ಟು ಬಿಚ್ಚಿಲ್ಲ.

ಅವನು ಓಡಿಹೋಗುವಂತಿಲ್ಲ. ಅದಕ್ಕೆ ನಾನು ಹೊಣೆ, ನಾನೇ ಹೀಗೆ ಅವನ ಮೊಣಕಾಲನ್ನು ಬಿಗಿದು ಕಟ್ಟಿದವನು,' ಎಂದನು.

ಬಂಧಿತನು ಈಗ ಗಟ್ಟಿಯಾಗಿ ಮಾತನಾಡಲಾರಂಭಿಸಿ, 'ನಿಮ್ಮನ್ನು ನೋಡಿ ನನಗೆ ವ್ಯಥೆಯಾಗುವುದು. ಆದರೆ, ನನ್ನ ಪ್ರಾಣವು ಇಷ್ಟು ಹೊತ್ತು ಹೋರಾಡಿ ರಕ್ಷಿಸಿಕೊಳ್ಳುವಷ್ಟು ಬೆಲೆ ಬಾಳತಕ್ಕುದಲ್ಲ. ನೀವು ನನ್ನನ್ನು ಮಾತನಾಡುವಂತೆ ಮಾಡ ಬಲ್ಲಿರೆಂತಲೂ, ನಾನು ಬರೆಯಲಿಷ್ಟಪಡದಿರುವ ವಿಷಯವನ್ನು ನನ್ನಿಂದ ಬರೆಯಿಸಬಲ್ಲಿರೆಂತಲೂ, ನಾನು ಹೇಳಲಿಷ್ಟಪಡದಂತಹ ವಿಚಾರವನ್ನು ನನ್ನಿಂದ ಹೇಳಿಸಬಲ್ಲಿರೆಂತಲೂ ನಿಮ್ಮ ಕಲ್ಪನೆ ಯಲ್ಲವೆ?'

ಎನ್ನುತ್ತ, ಅಂಗಿಯ ಎಡಗಡೆಯ ತೋಳನ್ನು ಮೇಲಕ್ಕೆ ಎಳೆದು, 'ಇದೋ! ನೋಡಿ,' ಎಂದು, ತೋಳನ್ನು ಚಾಚಿ, ತಾನು ಬಲಗೈಯಲ್ಲಿ ಮರದ ಹಿಡಿಯಿಂದ ಹಿಡಿದಿದ್ದ, ಪ್ರಜ್ವಲಿಸುತ್ತಿರುವ ಉಳಿಯನ್ನು ಆ ತೋಳಿನ ಮಾಂಸಖಂಡದ ಮೇಲೆ ಇಟ್ಟನು.

ಮಾಂಸವು ಉರಿದು, ಹಿಸ್ಸೆಂದ ಶಬ್ದವು ಅವರಿಗೆ ಕೇಳಿ ಬಂತು; ಹಿಂಸಾಗೃಹಗಳಲ್ಲಿ ರೂಢಿಯಾಗಿ ಬರುವ ವಿಚಿತ್ರವಾದ ವಾಸನೆಯು ಆ ಗವಿಯಂತಿದ್ದ ಮನೆಯಲ್ಲೆಲ್ಲಾ ತುಂಬಿತು. ಮೇರಿಯಸ್ಸನು ಈ ಭಯಂಕರ ದೃಶ್ಯದಿಂದ ತಟ್ಟಾಡಿ ಪ್ರಜ್ಞೆತಪ್ಪಿ ಬಿದ್ದನು. ಅಲ್ಲಿದ್ದ ತುಂಟರಿಗೂ ಎದೆಯು ನಡುಗಿತು. ಇಷ್ಟಾ ದರೂ ಆ ವಿಚಿತ್ರ ಪುರುಷನಾದ ವೃದ್ಧನ ಮುಖವು ಸ್ವಲ್ಪವಾದರೂ ಕಂದಿಕುಂದಲಿಲ್ಲ. ಕೆಂಪಗೆ ಕಾದ ಕಬ್ಬಿಣವು, ಪ್ರಬಲವಾದ ಗಾಯ ದೊಳಕ್ಕೆ ಹೊಗೆಯಾಡುತ್ತ ಇಳಿಯುತ್ತಿರಲು ಅವನು ತನ್ನ ಉದ್ದ ವಾದ ಮುಖವನ್ನು ಥೆನಾರ್ಡಿಯರನ ಕಡೆಗೆ ತಿರುಗಿಸಿದನು. ಆ ಮುಖದಲ್ಲಿ ಸ್ವಲ್ಪವೂ ವೈರಭಾವವಿರಲಿಲ್ಲ. ನೋವೂ ಕಷ್ಟವೂ ಮಾತ್ರ ಅವನ ವಿಚಿತ್ರವಾದ ದರ್ಪಗಾಂಭೀರ್ಯಗಳಲ್ಲಿ ಅಡ ಗಿದ್ದುವು. ಆಗ ಅವನು, 'ಪರಮ ನೀಚರಿರಾ, ನಾನು ನಿಮಗೆ ಹೇಗೆ ಹೆದರುವುದಿಲ್ಲವೋ ಅದರಂತೆಯೇ ನೀವೂ ನನಗೆ ಹೆದರ

ಬೇಕಾಗಿಲ್ಲ,' ಎಂದು ಉಳಿಯನ್ನು ಗಾಯದಿಂದ ತೆಗೆದು, ತೆರೆದಿದ್ದ ಕಿಟಕಿಯಿಂದ ಹೊರಕ್ಕೆ ಎಸೆದನು. ಅತಿ ಭಯಂಕರವಾಗಿ ಪ್ರಜ್ವಲಿಸುತ್ತಿದ್ದ ಆ ಕಬ್ಬಿಣವು, ಆ ರಾತ್ರಿಯ ಕತ್ತಲಲ್ಲಿ, ಬಿರ್ರನೆ ಹೋಗಿ ದೂರದಲ್ಲಿ ಬಿದ್ದು, ಮಂಜಿನಿಂದ ತಣ್ಣಗಾಗಿ ಮಾಯವಾಯಿತು. ಆ ಬಂದಿಯು ಮತ್ತೆ ಮಾತನಾಡಲಾರಂಭಿಸಿ, 'ನೀವು ನನ್ನನ್ನೇನು ಮಾಡಬೇಕೆಂದಿರುವಿರೋ ಮಾಡಿ,' ಎಂದನು.

ಈಗ ಅವನು ನಿರಾಯುಧನಾಗಿದ್ದನು.

'ಹಿಡಿಯಿರಿ ಅವನನ್ನು,' ಎಂದು ಥೆನಾರ್ಡಿಯರನು ಕೂಗಿದನು. ಇಬ್ಬರು ತುಂಟರು ಅವನ ಭುಜಗಳಮೇಲೆ ಕೈ ಹಾಕಿದರು.

ಈ ಸಮಯದಲ್ಲಿಯೇ ಮೇರಿಯಸ್ಸನಿಗೆ ತನ್ನ ಕೊಠಡಿಯ ತಳಭಾಗದಲ್ಲಿ, ಸಣ್ಣ ಧ್ವನಿಯಿಂದ ಆಡುತ್ತಿದ್ದ ಸಂಭಾಷಣೆಯೊಂದು ಕೇಳಿಬಂತು. ಅದು ಕೇವಲ ಸಮೀಪದಿಂದ ಕೇಳಿಸುತ್ತಿದ್ದರೂ ಮಾತನಾಡುತ್ತಿದ್ದವರು ಮಾತ್ರ ಅವನ ಕಣ್ಣಿಗೆ ಕಾಣುತ್ತಿರಲಿಲ್ಲ. ಆ ಸಂಭಾಷಣೆಯು ಈ ರೀತಿಯಾಗಿತ್ತು:

'ಇನ್ನು ಮಾಡ ಬೇಕಾದ ಕಾರ್ಯವೊಂದು ಮಾತ್ರ ಉಳಿದಿರುವುದು.'

'ಅವನನ್ನು ಕೊಲ್ಲುವುದು ತಾನೆ?'

'ಅಹುದು, ಅದೇ.'

ಈ ರೀತಿಯಾಗಿ ಮಂತ್ರಾಲೋಚನೆ ಮಾಡುತ್ತಿದ್ದವರು ಆ ಗಂಡಹೆಂಡಿರು.

ಥೆನಾರ್ಡಿಯರನು, ನಿದಾನವಾಗಿ ಹೆಜ್ಜೆ ಹಾಕಿಕೊಂಡು ಮೇಜಿನ ಬಳಿಗೆ ನಡೆದು ಬಂದು, ಅದರೊಳಗಿನಿಂದ ಕತ್ತಿಯನ್ನು ತೆಗೆದುಕೊಂಡನು.

ಮೇರಿಯಸ್ಸನು ತನ್ನ ತುಪಾಕಿಯ ಕುದುರೆಯನ್ನು ಒತ್ತಿ ಮೀಟುವ ಪ್ರಯತ್ನದಲ್ಲಿದ್ದನು. ಆದರೆ ಗಾಬರಿಯಿಂದ ಹುಚ್ಚನಂತೆ ಸುತ್ತಲೂ ನೋಡಿ ಬೆಚ್ಚಿಬಿದ್ದನು.

ಅವನ ಪಾದದ ಬಳಿಯಲ್ಲಿ ಮೇಜಿನ ಮೇಲೆ, ಶುದ್ಧವಾದ ಬೆಳ್ದಿಂಗಳ ಬೆಳಕು ಪ್ರಕಾಶಿಸುತ್ತಿದ್ದುದರಿಂದ, ಒಂದು ಕಾಗದದ ಹಾಳೆಯು ಅವನ ಕಣ್ಣಿಗೆ ಬಿತ್ತು. ಆ ಹಾಳೆಯ ಮೇಲೆ ಆ ದಿನ ಪ್ರಾತಃಕಾಲ ಥೆನಾರ್ಡಿಯರನ ಹಿರಿಯ ಮಗಳು ದೊಡ್ಡ ಅಕ್ಷರಗಳಿಂದ ಬರೆದಿದ್ದ ಈ ಪಙ್ಕ್ತಿಯು ಕಂಡಿತು :

'ಪೋಲೀಸಿನವರು ಬಂದಿದ್ದಾರೆ.'

ಆಗ ಮೇರಿಯಸ್ಸನ ಮನಸ್ಸಿಗೆ ತಟ್ಟನೆ ಒಂದು ಆಲೋಚನೆಯು ಹೊಳೆಯಿತು. ತನ್ನ ಮನಸ್ಸನ್ನು ಅಪರಿಮಿತವಾಗಿ ಬಾಧಿಸುತ್ತಿರುವ ಈ ಭಯಂಕರ ಸಂಧಿಯ ತೊಡಕನ್ನು ಬಿಡಿಸಿಕೊಳ್ಳಲು ಇದನ್ನೇ ತಕ್ಕ ಸಾಧನವನ್ನಾಗಿ ಉಪಯೋಗಿಸಿಕೊಳ್ಳಬೇಕೆಂದು ನಿಶ್ಚಯಿಸಿದನು.

ಅನಂತರ ತನ್ನ ಜೇಬಿನ ಮೇಲೆ ಮೊಣಕಾಲೂರಿ ಕುಳಿತು, ಕೈಚಾಚಿ, ಆ ಕಾಗದದ ಹಾಳೆಯನ್ನು ಎಟಕಿಸಿ ತೆಗೆದುಕೊಂಡು, ಆ ಅಡ್ಡ ಗೋಡೆಯಲ್ಲಿ ಒಂದು ಚೂರು ಗಾರೆಯನ್ನು ಮುರಿದು ಅದರಲ್ಲಿಟ್ಟು ಸುತ್ತಿ, ಆ ಸುರಳಿಯನ್ನು ಆ ಗವಿಯ ಮಧ್ಯಭಾಗಕ್ಕೆ ಎಸೆದನು.

---

ಹೊರತಾಯಿತು. ಥೆನಾರ್ಡಿಯರನು ತನ್ನ ಮನಸ್ಸಿನಲ್ಲಿ ಉಂಟಾಗಿದ್ದ ಭೀತಿ ಸಂದೇಹಗಳೆಲ್ಲವನ್ನೂ ಅಡಗಿಸಿಕೊಂಡು ಆ ಬಂದಿಯ ಸಮೀಪಕ್ಕೆ ಬರುತ್ತಿದ್ದನು.

'ಅದೇನೋ ಬಿತ್ತು,' ಎಂದು ಅವನ ಹೆಂಡತಿಯು ಕೂಗಿದಳು.

'ಏನದು?' ಎಂದು ಗಂಡನು ಕೇಳಿದನು.

ಆ ಸ್ತ್ರೀಯು ಫಕ್ಕನೆ ಮುಂದಕ್ಕೆ ಬಂದು, ಗಾರೆಯ ಚೂರನ್ನಿಟ್ಟು ಸುತ್ತಿದ ಕಾಗದದ ಸುರುಳಿಯನ್ನು ತೆಗೆದು ಗಂಡನ ಕೈಗೆ ಕೊಟ್ಟಳು.

ಥೆನಾರ್ಡಿಯರನು ಅತ್ಯಾತುರದಿಂದ ಅದನ್ನು ಬಿಚ್ಚಿ ದೀಪದ ಬಳಿಯಲ್ಲಿ ಎತ್ತಿ ಹಿಡಿದು ನೋಡಿ, ತನ್ನ ಹೆಂಡತಿಗೆ ಸಂಜ್ಞೆ ಮಾಡಲು ಅವಳು ಬೇಗನೆ ಬಳಿಗೆ ಬಂದಳು. ಆಗ ಅವಳಿಗೆ ಅದರಲ್ಲಿ ಬರೆದಿದ್ದ ಪಙ್ಕ್ತಿಯನ್ನು ತೋರಿಸಿ, ಅವನು ಮೆಲ್ಲನೆ, 'ಬೇಗ ಏಣಿಯನ್ನು ತಾ, ಬಲಿಪ್ರಾಣಿಯನ್ನು ಬೋನಿನಲ್ಲಿಯೇ ಬಿಟ್ಟು, ಸ್ಥಳವನ್ನು ಬಿಡಬೇಕು!' ಎಂದನು.

ಅದಕ್ಕೆ ಅವನ ಹೆಂಡತಿಯು, 'ಏನು? ಇವನ ಕುತ್ತಿಗೆಯನ್ನು ಕತ್ತರಿಸದೆಯೇ ಹೋಗುವುದೇ?' ಎಂದಳು.

'ಅದಕ್ಕೆ ಸಮಯವಿಲ್ಲ,' ಎಂದು ಅವನು ಹೇಳಲು, ಅಲ್ಲಿದ್ದವರಲ್ಲಿ ಒಬ್ಬನು, 'ಯಾವ ಮಾರ್ಗವಾಗಿ ಹೋಗುವುದು,' ಎಂದು ಕೇಳಿದನು.

ಥೆನಾರ್ಡಿಯರನು, 'ಕಿಟಿಕಿಯ ಮಾರ್ಗವಾಗಿಯೇ ಹೋಗಬೇಕು. ಹುಡುಗಿಯು ಕಿಟಿಕಿಯಿಂದಲೇ ಕಲ್ಲನ್ನು ಎಸೆದಳು. ಇದರಿಂದ ಆ ಕಡೆಯಲ್ಲಿ ಯಾರೂ ಈ ಮನೆಯ ಮೇಲೆ ಕಾವಲಿಲ್ಲವೆಂದು ಕಾಣುವುದು,' ಎಂಬದಾಗಿ ಉತ್ತರ ಕೊಟ್ಟನು.

ಆ ಬಂದಿಯನ್ನು ಹಿಡಿದಿದ್ದ ಪಟಿಂಗರು ಅವನನ್ನು ಬಿಟ್ಟುಬಿಟ್ಟರು. ಕಣ್ಣು ಮಿಟಿಕಿಸುವಷ್ಟರಲ್ಲಿ ನೂಲೇಣಿಯನ್ನು ಎರಡು

ಕಬ್ಬಿಣದ ಕೊಂಡಿಗಳಿಂದ ಕಂಬಿಗಳಿಗೆ ತಗುಲಿಸಿಟ್ಟು, ಕಿಟಿಕಿಯ ಹೊರಭಾಗಕ್ಕೆ ಜಿಚ್ಚಿ ಬಿಸೆದರು.

ಆ ಬಂದಿಯು ತನ್ನ ಸುತ್ತಲೂ ಏನೇನು ನಡೆಯುತ್ತಿರುವು ದೆಂಬುದನ್ನು ಗಮನಿಸಲೇ ಇಲ್ಲ. ಅವನು ಸ್ವಪ್ನದಲ್ಲಿಯೋ ಧ್ಯಾನದಲ್ಲಿಯೋ ಇದ್ದಂತೆ ಕಂಡನು.

ನೂಲೇಣಿಯು ಸಿದ್ಧವಾದ ಕೂಡಲೇ ಥೆನಾರ್ಡಿಯರನು, 'ಬಾ ಪ್ರಿಯೆ,' ಎಂದು ಕೂಗಿಕೊಂಡು ಕಿಟಿಕಿಯ ಬಳಿಗೆ ನುಗ್ಗಿದನು.

ಆದರೆ ಅವನು ಹೊರಗೆ ಕಾಲಿಡುವಷ್ಟರೊಳಗೆ, ಅಲ್ಲಿದ್ದವರಲ್ಲಿ ಒಬ್ಬನು ಅವನ ಕೊರಳ ಪಟ್ಟಿಯನ್ನು ಬಲವಾಗಿ ಹಿಡಿದು ನಿಲ್ಲಿಸಿ, 'ಎಲಾ ಕಳ್ಳ ಮುದುಕಾ ! ನಿಲ್ಲು ; ನಾವು ಮೊದಲು ಹೋಗುವೆವು, ನಮ್ಮ ಹಿಂದೆ ನೀನು,' ಎಂದನು.

'ಅಹುದು ! ನಮ್ಮ ಹಿಂದೆ ನೀನು,' ಎಂದು ಉಳಿದ ತುಂಟರೂ ಆರ್ಭಟಿಸಿದರು. ಥೆನಾರ್ಡಿಯರನು, 'ಅಯ್ಯೋ, ನೀವು ಮಕ್ಕಳಾಟವಾಡುತ್ತಿರುವಿರಿ, ನಮಗೆ ಇದರಲ್ಲೇ ಕಾಲಹರಣವಾಗು ತ್ತಿದೆ. ಪೋಲೀಸಿನವರು ನಮ್ಮನ್ನು ಬೆನ್ನಟ್ಟಿದ್ದಾರೆ,' ಎಂದನು.

ಆಗ ಆ ತುಂಟರಲ್ಲಿ ಒಬ್ಬನು, 'ಒಳ್ಳೆಯದು ! ನಮ್ಮಲ್ಲಿ ಯಾರು ಮೊದಲು ಹೋಗಬೇಕೆಂಬುದಕ್ಕೆ, ಚೀಟಿಹಾಕಿ, ಅದೃಷ್ಟ ಪರೀಕ್ಷೆ ಮಾಡೋಣ,' ಎಂದನು.

ಥೆನಾರ್ಡಿಯರನು, 'ಎಲವೋ ! ನೀವೇನು ಹುಚ್ಚರೇ ? ನಿಮಗೆ ಬುದ್ಧಿ ಪಲ್ಲಟವಾಗಿದೆಯೇ ? ಇದರಿಂದ ಕಾಲವನ್ನು ಕಳೆದು ಬಿಡುವುದೇ ಅಲ್ಲವೇ ? ಚೀಟಿಯಂತೆ ! ಅದೃಷ್ಟ ಪರೀಕ್ಷೆಯಂತೆ ! ಈ ಸಣ್ಣ ಕೆಲಸಕ್ಕೆ ! ಇದಕ್ಕಾಗಿ ನಮ್ಮ ಹೆಸರುಗಳನ್ನು ಬರೆಯು ವುದು ! ಟೋಪಿಯಲ್ಲಿ ಹಾಕುವುದು ...'

'ನನ್ನ ಟೋಪಿಯನ್ನು ಕೊಡಲೇ ?' ಎಂದ ಶಬ್ದವು ಬಾಗಿಲ ಕಡೆಯಿಂದ ಕೇಳಿಬಂತು.

ಎಲ್ಲರೂ ತಿರುಗಿ ನೋಡಿದರು. ಅದು ಯಾರು ? ಜೇವರ್ಟನು !



ಜೀವರ್ಟನು ಥೆನಾರ್ಡಿಯರನ ಗುಹೆಯೊಳಕ್ಕೆ ನುಗ್ಗಿದುದು

ಕೈಯಲ್ಲಿ ಟೋಪಿಯನ್ನು ಹಿಡಿದು, ನಗುತ್ತ, ಮುಂದಕ್ಕೆ ಚಾಚಿದನು.

ಅವನು ಸರಿಯಾದ ಸಮಯಕ್ಕೇ ಬಂದನು.

ಆ ಗಾಬರಿಸಿದ್ದ ತುಂಟರು ತಾವು ಓಡಿಹೋಗಲು ಯತ್ನಿಸುವ ಆತುರದಲ್ಲಿ ಎಲ್ಲೆಲ್ಲಿಯೋ ಎಸೆದುಬಿಟ್ಟಿದ್ದ ತಮ್ಮ ಆಯುಧಗಳಿಗಾಗಿ ನುಗ್ಗಿ ಓಡಿಯಾಡಿದರು. ನೋಡುವುದಕ್ಕೆ ಭಯಂಕರರಾಗಿದ್ದ ಈ ಏಳು ಮಂದಿಯೂ ಅರ್ಧ ಕ್ಷಣದೊಳಗಾಗಿ, ಪ್ರತಿಯೊಬ್ಬರೂ ಕೈಯಲ್ಲಿ ಒಂದೊಂದು ಆಯುಧವನ್ನು ಹಿಡಿದು ಆತ್ಮರಕ್ಷಣೆಗಾಗಿ ಗುಂಪುಕಟ್ಟಿ ನಿಂತರು. ಥೆನಾರ್ಡಿಯರನ ಹೆಂಡತಿಯು ಕಿಟಕಿಯ ಮೂಲೆಯಲ್ಲಿದ್ದ ಒಂದು ಹಾಸುಗಲ್ಲನ್ನು ಎತ್ತಿಕೊಂಡಳು.

ಜೇವರ್ಟನು ಮತ್ತೆ ಟೋಪಿಯನ್ನು ತಲೆಗೆ ಧರಿಸಿಕೊಂಡು ಕೈಗಳನ್ನು ಕಟ್ಟಿ, ಕಂಕುಳಲ್ಲಿ ಚಿತ್ರವನ್ನೂ ಒರೆಯಲ್ಲಿ ಕತ್ತಿಯನ್ನೂ ಇಟ್ಟುಕೊಂಡು, ಕೊಠಡಿಯೊಳಕ್ಕೆ ಹೆಜ್ಜೆಯಿಟ್ಟನು.

ಜೇವರ್ಟನು ಕೂಗಿದೊಡನೆಯೇ ಬಿಚ್ಚುಕತ್ತಿ, ಗಂಡುಗೊಡಲಿ, ದೊಣ್ಣೆಗಳನ್ನು ಹಿಡಿದಿದ್ದ ಪೋಲೀಸ್ ಅಧಿಕಾರಿಗಳ ಒಂದು ಸೈನ್ಯವು ಒಳಗೆ ನುಗ್ಗಿತು. ಸಿಪಾಯಿಗಳು ಈ ತುಂಟರನ್ನು ಹಿಡಿದು ಕಟ್ಟಿದರು. ಸಣ್ಣ ದೀಪದ ಬೆಳಕಿನಿಂದ ಮಂಕುಮಂಕಾಗಿದ್ದ ಆ ಗವಿಯಲ್ಲಿ ಜನರ ಗುಂಪಿನ ನೆರಳು ತುಂಬಿತ್ತು.

'ಎಲ್ಲರಿಗೂ ಕೈಕೋಳಗಳನ್ನು ಹಾಕಿ,' ಎಂದು ಜೇವರ್ಟನು ಕೂಗಿದನು. 'ಹಾಗಾದರೆ ಬನ್ನಿ,' ಎಂದು ಒಂದು ಶಬ್ದವು ಕೇಳಿಸಿತು. ಅದು ಗಂಡಸಿನ ಧ್ವನಿಯಲ್ಲ. ಆದರೆ ಇದು ಹೆಂಗಸಿನ ಧ್ವನಿ ಎಂದು ಯಾರೂ ಹೇಳುವ ಹಾಗಿರಲಿಲ್ಲ.

ಥೆನಾರ್ಡಿಯರನ ಪತ್ನಿಯು ಕಿಟಿಕಿಯ ಒಂದು ಮೂಲೆಯಲ್ಲಿ ಅಡಗಿಕೊಂಡಿದ್ದಳು. ಅವಳೇ ಆಗತಾನೇ ಈ ರೀತಿ ಅರ್ಭಟಿಸಿ ಕೂಗಿದವಳು.

ಅವಳು ತಾನು ಹೊದೆದಿದ್ದ ಶಾಲನ್ನು ತೆಗೆದುಹಾಕಿ, ತಲೆಗೆ

ಟೋಪಿಯನ್ನು ಧರಿಸಿದ್ದಳು. ಅವಳ ಗಂಡನು ಅವಳ ಹಿಂದೆಯೇ ಕುಕ್ಕರಿಸಿ, ಕೆಳಗೆ ಬಿದ್ದಿದ್ದ ಶಾಲಿನೊಳಗೆ ಅಡಗಿಕೊಂಡನು. ಅವಳು ಅವನಿಗೆ ಮರೆಯಾಗಿ ಎರಡು ಕೈಗಳಿಂದಲೂ ಹಾಸುಗಲ್ಲನ್ನು ತನ್ನ ತಲೆಯ ಮೇಲ್ಗಡೆಯಲ್ಲಿ ಎತ್ತಿ ಹಿಡಿದು, ಬಂಡೆಯನ್ನು ಎಸೆಯುವ ರಾಕ್ಷಸಿಯಂತೆ ನಿಂತುಕೊಂಡು, 'ಎಚ್ಚರಿಕೆ,' ಎಂದು ಕೂಗಿದಳು.

ಅವರೆಲ್ಲರೂ ಆ ಕೊಠಡಿಯಲ್ಲಿ ಹಿಂದುಗಡೆ ಗುಂಪಾಗಿ ಸೇರಿಕೊಂಡರು. ಮಧ್ಯ ಭಾಗದಲ್ಲಿ ವಿಸ್ತಾರವಾದ ಸ್ಥಳವಿತ್ತು.

ಥೆನಾರ್ಡಿಯರನ ಹೆಂಡತಿಯು ಆ ತುಂಟರ ಕಡೆಗೆ ಒಂದು ಸಲ ನೋಡಿದಳು. ಈ ವೇಳೆಗೆ ಪೋಲೀಸಿನವರು ಎಲ್ಲರನ್ನೂ ಬಂಧಿಸಿದ್ದರು ಅವಳು ಒಳಗಂಟಲ ಕರ್ಕಶ ಧ್ವನಿಯಿಂದ 'ಹೇಡಿಗಳು' ಎಂದು ಗೊಣಗಿದಳು.

ಜೇವರ್ಟನು ನಕ್ಕು, ಆ ಕೊಠಡಿಯ ಮಧ್ಯಭಾಗಕ್ಕೆ ಹೋದನು. ಇದೆಲ್ಲವನ್ನೂ ಥೆನಾರ್ಡಿಯರನ ಪತ್ನಿಯು ನೆಟ್ಟ ದೃಷ್ಟಿಯಿಂದ ನೋಡುತ್ತಿದ್ದಳು.

ಆಗ ಅವಳು, 'ಹತ್ತಿರ ಬರಬೇಡ, ಆಚೆಗೆ ಹೋಗು, ಇಲ್ಲವಾದರೆ ನಿನ್ನನ್ನು ಜಜ್ಜಿಬಿಡುತ್ತೇನೆ,' ಎಂದು ಗರ್ಜಿಸಿದಳು.

ಅದಕ್ಕೆ ಜೇವರ್ಟನು, 'ಆಹಾ! ಇದೆಂತಹ ಫಿರಂಗಿಯಂತಹ ಹೆಂಗಸು! ತಾಯಿ, ನಿನಗೆ ಪುರುಷನಂತೆ ಗಡ್ಡವಿದೆ; ಆದರೆ ನನಗೆ ಹೆಂಗಸಿನಂತೆ ಉಗುರುಗಳಿವೆ,' ಎಂದು ಹೇಳುತ್ತ ಮುಂದು ಮುಂದಕ್ಕೆ ಹೋಗುತ್ತಲೇ ಇದ್ದನು.

ಥೆನಾರ್ಡಿಯರನ ಹೆಂಡತಿಯು ಭಯಂಕರವಾಗಿ ತಲೆಗೂದಲನ್ನು ಕೆದರಿಕೊಂಡು, ಕಾಲುಗಳನ್ನು ಜೋಡಿಸಿ, ಹಿಂದಕ್ಕೆ ಬಾಗಿ, ಆ ಹಾಸುಗಲ್ಲನ್ನು ಜೇವರ್ಟನ ತಲೆಯ ಕಡೆಗೆ ಬಿರ್ರನೆ ಎಸೆದಳು. ಜೇವರ್ಟನು ತಟ್ಟನೆ ಬಗ್ಗಿದನು. ಕಲ್ಲು ಅವನ ತಲೆಯ ಮೇಲೆ ಹಾದು ಹೋಗಿ ಎದುರು ಗೋಡೆಗೆ ಬಡಿದು, ಒಂದು ದೊಡ್ಡ ಗಾರೆಯ ಹೆಂಟೆಯನ್ನು ಕೆಡಹಿ, ಮೂಲೆಯ ಕಡೆಯಿಂದ ಹಿಂದಿರುಗಿ ಪುಟಹಾರಿ, ಕೊಠಡಿಯಲ್ಲೆಲ್ಲಾ ತಿರುಗಿತು. ದೈವಯೋಗದಿಂದ

ಏನೂ ಅಪಾಯ ಆಗದೆ ಕಡೆಗೆ ಜೇವರ್ಟನ ಹಿಂಗಾಲಿನ ಹತ್ತಿರ ಬಂದು ಬಿದ್ದಿತು.

ಈ ಸಮಯಕ್ಕೆ ಜೇವರ್ಟನು ಥೆನಾರ್ಡಿಯರ್ ದಂಪತಿಗಳ ಬಳಿಗೆ ಬಂದಿದ್ದನು. ಅವನ ದೊಡ್ಡದಾದ ಒಂದು ಹಸ್ತವು ಆ ಹೆಂಗಸಿನ ಭುಜದ ಮೇಲೆಯೂ ಮತ್ತೊಂದು ಅವಳ ಗಂಡನ ತಲೆಯ ಮೇಲೆಯೂ ಬಿದ್ದವು. ಆ ಕೂಡಲೆ ಅವನು, 'ಕೈಕೋಳ ಗಳು!' ಎಂದು ಕೂಗಿದನು. ಪೊಲೀಸ್ ಅಧಿಕಾರಿಗಳು ಗುಂಪಾಗಿ ಬಂದು ಒಂದೆರಡು ಕ್ಷಣಗಳಲ್ಲಿ ಜೇವರ್ಟನ ಆಜ್ಞೆಯನ್ನು ನಡೆಯಿಸಿದರು.

ಆಗತಾನೆ ಜೇವರ್ಟನು ಈ ತುಂಟರು ಹಿಡಿದಿದ್ದ ಬಂದಿಯನ್ನು ಕಂಡನು. ಆ ಬಂದಿಯು ಪೊಲೀಸಿನವರು ಬಂದುದು ಮೊದಲಾಗಿ ಒಂದು ಮಾತನ್ನೂ ಆಡದೆ, ತಲೆಯನ್ನು ತಗ್ಗಿಸಿ ನಿಂತಿದ್ದನು.

ಜೇವರ್ಟನು, 'ಮಾನ್‌ಸಿಯುರನನ್ನು ಬಿಚ್ಚಿರಿ; ಯಾರನ್ನೂ ಹೊರಗೆ ಹೋಗಲು ಬಿಡಬೇಡಿ,' ಎಂದನು.

ಹೀಗೆ ಹೇಳಿ, ಅವನು ಅಧಿಕಾರ ದರ್ಪದಿಂದ ಮೇಜಿನ ಮುಂದೆ ಕುಳಿತನು. ಅದರ ಮೇಲೆ ದೀಪವೂ ಲೇಖನ ಸಾಮಗ್ರಿಗಳೂ ಇದ್ದವು. ತನ್ನ ಜೇಬಿನಿಂದ ಮುದ್ರೆಹೊಡೆದಿದ್ದ ಕಾಗದವನ್ನು ತೆಗೆದು ಅವನು ತನ್ನ ವರದಿಯನ್ನು ಬರೆಯಲಾರಂಭಿಸಿದನು.

ಪದ್ಧತಿಯಂತೆ ಎಲ್ಲ ವರದಿಗಳಲ್ಲಿಯೂ ಬರೆಯಬೇಕಾಗಿದ್ದ ಒಕ್ಕಣೆಗಳ ಪಙ್ಕ್ತಿಯನ್ನು ಬರೆದು, ತಲೆಯನ್ನೆತ್ತಿ, 'ಈ ಸಭ್ಯಜನರು ಕಟ್ಟಿಹಾಕಿದ್ದ ಆ ಬಂದಿವಾನನನ್ನು ಮುಂದಕ್ಕೆ ಕರೆತನ್ನಿ,' ಎಂದನು.

ಅಧಿಕಾರಿಗಳು ಸುತ್ತಲೂ ನೋಡಿದರು.

ಜೇವರ್ಟನು, 'ಒಳ್ಳೆಯದು! ಈಗ ಅವನೆಲ್ಲಿ?' ಎಂದನು.

ತುಂಟರು ಹಿಡಿದಿದ್ದ ಬಂದಿಯು ಮಾಯವಾಗಿದ್ದನು. ಬಾಗಿಲಲ್ಲಿ ಕಾವಲಿತ್ತು. ಆದರೆ ಕಿಟಿಕಿಯ ಬಳಿಯಲ್ಲಿ ಮಾತ್ರ ಯಾರೂ ಇರಲಿಲ್ಲ. ತನ್ನನ್ನು ಅವರು ಬಿಚ್ಚಿದ ಕೂಡಲೆ ಆ

ಬಂದಿಯು ಜೇವರ್ಟನು ಬರೆಯುತ್ತಿದ್ದ ಸಮಯವನ್ನು ನೋಡಿ, ಅಲ್ಲಿಯ ದಾಂಧಲೆ ಗದ್ದಲ ಗೊಂದಲಗಳು ತನಗೆ ಅನುಕೂಲ ವಾಯಿತೆಂದು ಆಲೋಚಿಸಿ, ಅವರ ಗಮನವು ತನ್ನ ಮೇಲೆ ಬೀಳದೆ ಇದ್ದ ಕ್ಷಣದಲ್ಲಿ ಕಿಟಿಕಿಯಿಂದ ಹೊರಕ್ಕೆ ನೆಗೆದುಬಿಟ್ಟನು.

ಒಬ್ಬ ಅಧಿಕಾರಿಯು ಕಿಟಿಕಿಯ ಬಳಿಗೆ ಓಡಿಹೋಗಿ ಹೊರಗೆ ನೋಡಲು ಅಲ್ಲಿ ಯಾರೂ ಕಾಣಲಿಲ್ಲ. ನೂಲೇಣಿಯು ಇನ್ನೂ ಅದಿರುತ್ತಲೇ ಇತ್ತು. ಜೇವರ್ಟನು ಹಲ್ಲು ಕಡಿಯುತ್ತ, 'ಎಲ ಪಿಶಾಚೀ, ಇವನು ಎಲ್ಲರನ್ನೂ ಮೀರಿಸಿದವನಿರಬೇಕು!' ಎಂದನು.

ಮೇರಿಯುಸ್ಸನು, ಥೆನಾರ್ಡಿಯರನ ಕೊಠಡಿಯಲ್ಲಿ ಏನೇನು ನಡೆಯಿತೆಂಬುದೆಲ್ಲವನ್ನೂ ಕಡೆಯವರೆಗೂ ನೋಡಿ, ಆ ಮಾರನೆಯ ದಿನವೇ ಪ್ಯಾರಿಸ್ ನಗರದ ಬೇರೆ ಭಾಗದಲ್ಲಿ ವಾಸ ಮಾಡಲು ಹೊರಟು ಹೋದನು. ಎರಡು ತಿಂಗಳವರೆಗೆ ಇವನು ಲೆಬ್ಲಾಂಕನ ಮಗಳು ಎಲ್ಲಿರುವಳೆಂಬುದನ್ನರಿಯದೆ ಮೋಹ ತಾಪದಿಂದ ತಲ್ಲಣಿಸಿದನು. ಆದರೆ ಒಂದುದಿನ ಥೆನಾರ್ಡಿಯರನ ಹಿರಿಯ ಮಗಳು ಅವಳ ಗುರುತಿನ ವಿಳಾಸವನ್ನು ತಂದು ತಿಳಿಸಿ ಅವನ ಮನಸ್ಸನ್ನು ಸಂತೋಷಪಡಿಸಿದಳು.

---

## ೧೫

ಜೀನ್ ವಾಲ್ಜೀನ ತಾನು ಸುರಕ್ಷಿತನಾಗಿಯೂ ಸುಖವಾಗಿಯೂ ಇದ್ದ ಆ ಮಠವನ್ನೇತಕ್ಕೆ ಬಿಟ್ಟುಬಂದನೆಂಬುದನ್ನು ತಿಳಿಯಲು ನಾವು ಕೆಲವು ವರ್ಷಗಳ ಹಿಂದಣ ಕಥೆಯನ್ನು ತಿಳಿಯುವುದು ಆವಶ್ಯಕ. ಆರಂಭದಲ್ಲಿ ಇವನು, ಕೋಸೆಟ್ಟಳು ಆ ಮಠದಲ್ಲಿಯೇ ಸನ್ಯಾಸಿಯಾಗಲು ಒಪ್ಪುವುದಾದರೆ, ತಾನೂ ಅಲ್ಲಿಯೇ ಇದ್ದು ತನ್ನ ಜೀವನವನ್ನು ಕಳೆಯಬೇಕೆಂಬ ಉದ್ದೇಶದಿಂದಿದ್ದನು. ಆದರೆ ಪ್ರಾಪಂಚಿಕ ವಿಷಯಗಳನ್ನು ಪರಿಶೀಲಿಸಿ ನೋಡಿ ತನಗೆ ಇಷ್ಟವಾದ ಜೀವನಕ್ರಮವನ್ನು ಆರಿಸಿಕೊಳ್ಳಲು ಅವಳಿಗೆ ಅವಕಾಶ ಕೊಡದಿರುವುದು ತಪ್ಪೆಂದು ಕ್ರಮಕ್ರಮವಾಗಿ ಅವನ ಗೋಚರಕ್ಕೆ ಬಂದಿತು. [illegible] ಅಲ್ಲಿಯ ಯೋಗಿನಿಯ ಅಪ್ಪಣೆಯನ್ನು ಪಡೆದು ಕೋಸೆಟ್ಟಳನ್ನು ಅಲ್ಲಿಂದ ಕರೆದುಕೊಂಡು ಹೊರಟುಬಂದನು.

ಮಠವನ್ನು ಬಿಟ್ಟ ಮೇಲೆ, ತನ್ನ ಚಿಕ್ಕ ಪೆಟ್ಟಿಗೆಯನ್ನು ಯಾರ ವಶಕ್ಕೂ ಕೊಡದೆ ತಾನೇ ಹೊತ್ತುಕೊಂಡು ಹೋಗುತ್ತಿದ್ದನು. ಅದರ ಬೀಗದ ಕೈಯೂ ಕೂಡ, ಯಾವಾಗಲೂ, ಅವನ ವಶದಲ್ಲಿಯೇ ಇರುತ್ತಿತ್ತು. ಇಲ್ಲಿಂದೀಚೆಗೆ, ಅವನು ಸ್ಥಳವನ್ನು ಬದಲಾಯಿಸಿದಾಗಲೆಲ್ಲಾ, ತಪ್ಪದೆ ತೆಗೆದುಕೊಂಡು ಹೋಗುತ್ತಿದ್ದ ಆಸ್ತಿಯಲ್ಲಿ ಇದೇ ಮೊದಲನೆಯದಾಗಿತ್ತು. ಕೆಲವು ವೇಳೆ, ಇದೊಂದನ್ನೇ ತೆಗೆದುಕೊಂಡು ಹೋಗುತ್ತಿದ್ದನು. ಇದು ವಿಚಿತ್ರವೆಂದು ಕೋಸೆಟ್ಟಳು ನಗುತ್ತಿದ್ದುದಲ್ಲದೆ, ಈ ಪೆಟ್ಟಿಗೆಗೆ 'ಅಗಲಲಾಗದ ಅತಿವಸ್ತು' ಎಂದು ಹೆಸರಿಟ್ಟು, 'ನನಗೆ ಇದನ್ನು ಕಂಡರೆ ಆಗದು,' ಎನ್ನುತ್ತಿದ್ದಳು.

ಹೇಗಾದರೂ ಜೀನ್ ವಾಲ್ಜೀನನು, ಪ್ರಬಲವಾದ ಭೀತಿ ವ್ಯಸನಗಳಿಲ್ಲದೆ, ಬಹಿರಂಗವಾಗಿ ನಗರದಲ್ಲಿ ಬರುತ್ತಿರಲಿಲ್ಲ.

ರೂ ಪ್ಲೂಮೆಟ್ ಬೀದಿಯಲ್ಲಿ ಮನೆಯನ್ನು ಗೊತ್ತುಮಾಡಿ.

ಕೊಂಡು ಅಲ್ಲಿಯೇ ಅಡಗಿಕೊಂಡಿದ್ದನು. ಇಲ್ಲಿಂದೀಚೆಗೆ ಇವನಿಗೆ ಅಲ್ಟಿಮುಸ್ ಫಾಚೆಲ್‌ವೆಂಟ್ ಎಂಬ ಹೆಸರು ಸ್ಥಿರ ವಾಯಿತು.

ಅವನು ಪ್ಯಾರಿಸ್ ನಗರದಲ್ಲಿ ಈಗ ಇನ್ನೂ ಎರಡು ಮನೆ ಗಳನ್ನು ಬಾಡಿಗೆಗೆ ತೆಗೆದುಕೊಂಡನು. ಒಂದೇ ಮನೆಯಲ್ಲಿ ಇರು ವುದಕ್ಕೆ ಪ್ರತಿಯಾಗಿ ತಾನು ಹೀಗೆ ಬೇರೆ ಬೇರೆ ಕಡೆಗಳಲ್ಲಿದ್ದರೆ, ತನ್ನ ಮೇಲೆ ಜನರ ಗಮನವು ಹೆಚ್ಚಾಗಿ ಬೀಳಲಾರದೆಂತಲೂ, ತನಗೇನಾದರೂ ಭೀತಿಯು ಮನಸ್ಸಿಗೆ ಸ್ವಲ್ಪ ತೋರಿದರೂ ತನ್ನ ವಾಸಸ್ಥಾನವನ್ನು ಬದಲಾಯಿಸಬಹುದೆಂತಲೂ, ಕಡೆಗೆ, ಆ ದಿನ ರಾತ್ರಿ ತಾನು ಜೇವರ್ಟನ ಕೈಗೆ ಸಿಕ್ಕಿದ್ದು, ಪರಮಾಶ್ಚರ್ಯ ರೀತಿ ಯಿಂದ ತಪ್ಪಿಸಿಕೊಂಡು ಓಡಿಬಂದಂತಹ ಕ್ಲಿಷ್ಟಸಂಧಿಗೆ ತಾನು ಮತ್ತೆ ಸಿಕ್ಕದಿರಬೇಕೆಂತಲೂ ಸಹ ಇವನು ಬೇರೆ ಎರಡು ಮನೆ ಗಳನ್ನು ಬಾಡಿಗೆಗೆ ತೆಗೆದುಕೊಂಡು ತನ್ನ ವಶದಲ್ಲಿಟ್ಟುಕೊಂಡನು. ಈ ಎರಡು ಮನೆಗಳೂ ಬಹಳ ಸಣ್ಣವು. ನೋಡುವುದಕ್ಕೆ ತೀರ ಬಡವರ ಮನೆಗಳಂತೆ ಕಾಣುತ್ತಿದ್ದುವು; ಮತ್ತು ಒಂದೊಂದಕ್ಕೂ ಬಹಳ ದೂರ ಅಂತರವಿತ್ತು. ಒಂದು, ರೂ ಡಿ ಎಲ್ ಔವೆಸ್ಟ್ ಬೀದಿಯಲ್ಲಿಯೂ ಮತ್ತೊಂದು ರೂ ಡಿ ಎಲ್'ಹೋಂ ಆರಂ ಬೀದಿ ಯಲ್ಲಿಯೂ ಇದ್ದುವು.

ಆಗಾಗ, ಒಂದು ಸಲ ರೂ ಡಿ ಎಲ್'ಹೋಂ ಆರಂ ಮನೆಗೂ ಒಂದು ಸಲ ರೂ ಡಿ ಎಲ್ ಔವೆಸ್ಟ್ ಮನೆಗೂ ಅವನು ಹೋಗಿ ಅಲ್ಲಿ ಒಂದು ತಿಂಗಳು ಅಥವಾ ಆರು ವಾರಗಳನ್ನು ಕೋಸೆಟ್ಟೆ ಯೊಡನೆ ಕಳೆಯುತ್ತಿದ್ದನು. ನಾಪಹೂನು ಹೊರುನ ಸೇವಕರು ಇವನ ಆಜ್ಞೆಯನ್ನು ನಿರೀಕ್ಷಿಸಿಕೊಂಡೇ ಇರುತ್ತಿದ್ದರು. ಮತ್ತು ಇವನು ಆ ಸುತ್ತಮುತ್ತಣ ಯಾವುದೋ ಗ್ರಾಮದ ಧನಿಕ ನೆಂತಲೂ ಪಟ್ಟಣದಲ್ಲಿ ಏನೋ ಕಾರ್ಯಕ್ಕಾಗಿ ಬರುತ್ತಿರುವ ನೆಂತಲೂ ಜನಗಳಲ್ಲಿ ಅಭಿಪ್ರಾಯವುಂಟಾಗುವಂತೆ ಮಾಡಿ ಕೊಂಡನು. ಈ ಪುಣ್ಯಶೀಲನಾದ ಪ್ರಾಣಿಯು, ಪೊಲೀಸಿನವರಿಂದ

ತಪ್ಪಿಸಿಕೊಳ್ಳಲು ಪ್ಯಾರಿಸ್ ನಗರದಲ್ಲಿ ಮೂರು ಸ್ಥಿರ ನಿವಾಸ ಗಳನ್ನು ಏರ್ಪಡಿಸಿಕೊಳ್ಳುವುದು ಆವಶ್ಯಕವಾಯಿತು.

ಈ ರೂ ಪ್ಲೂಮೆಟ್ ಬೀದಿಯಲ್ಲಿಯ ಮನೆಯಿಂದಲೇ ಜೀನ್ ವಾಲ್ಜೀನನೂ ಕೋಸೆಟ್ಟಳೂ, ಲಕ್ಸಂಬರ್ಗಿನ ಉದ್ಯಾನಕ್ಕೆ ನಿತ್ಯವೂ ಸಂಚಾರ ಹೋಗುತ್ತಿದ್ದುದು. ಇವರು ಅಲ್ಲಿ ನೋಡಿದ ತರುಣನು ಕೋಸೆಟ್ಟಳನ್ನು ತನ್ನ ಅನುರಾಗಪೂರ್ವಕ ದೃಷ್ಟಿಗಳಿಂದ ನೋಡುತ್ತಿದ್ದುದನ್ನು ಇವನು ಮೊದಲು ಮೊದಲು ಗಮನಿಸಲಿಲ್ಲ. ಇವನ ಗಮನಕ್ಕೆ ಅದು ಬಂದ ಮೇಲೆ, ಆದರಲ್ಲಿಯೂ ಆ ತರುಣನು ತಮ್ಮನ್ನೇ ಅನುಸರಿಸಿ ಮನೆಗೆ ಬರುತ್ತಿದ್ದುದನ್ನು ನೋಡಿದಾಗ, ತಾನು ಕೋಸೆಟ್ಟಳನ್ನು ಅಗಲಬೇಕಾದೀತೆಂಬ ಭೀತಿಯು ಇವನಿಗೆ ಪ್ರಬಲವಾಯಿತು. ಇದರಿಂದ ಅವನು ರೂ ಪ್ಲೂಮೆಟ್ ಬೀದಿಯಲ್ಲಿದ್ದ ತನ್ನ ಮನೆಯನ್ನು ಬಿಟ್ಟು ಹೊರಟನು.

ಕೋಸೆಟ್ಟಳು ಬೇಡವೆನ್ನಲಿಲ್ಲ; ಮಾತೇ ಆಡಲಿಲ್ಲ; ಯಾವ ಪ್ರಶ್ನೆಯನ್ನೂ ಕೇಳಲಿಲ್ಲ. ಇದಕ್ಕೆ ಕಾರಣವೇನೆಂಬುದನ್ನು ತಿಳಿ ಯಲು ಅಪೇಕ್ಷಿಸಲೂ ಇಲ್ಲ. ತನ್ನ ಗುಟ್ಟು ರಟ್ಟಾದೀತೆಂಬ ಭೀತಿ ತೋರಿ, ಅದಕ್ಕೆ ಅವಕಾಶಕೊಡದಿರಬೇಕೆಂಬ ಎಚ್ಚರಿಕೆಯು ಅವಳಿಗಾಗಲೇ ಹುಟ್ಟಿತ್ತು. ಜೀನ್ ವಾಲ್ಜೀನನು ಇಂತಹ ಮೋಹ ಚಿಂತೆಯ ವಂಚನೆಯನ್ನು ಕಂಡವನೇ ಅಲ್ಲ. ಮನೋಹರವಾದ ಚಿಂತೆಯೆಂದರೆ ಇದೊಂದೇ. ಈ ಒಂದು ಚಿಂತೆಯನ್ನು ಮಾತ್ರವೇ ಅವನು ಅರಿಯನು. ಆದಕಾರಣ, ಕೋಸೆಟ್ಟಳು ಅಷ್ಟು ಪ್ರಬಲ ಮೌನ ವಹಿಸಿದುದರ ಮುಖ್ಯ ಭಾವವೇನೆಂಬುದು ಅವನಿಗೆ ಗೊತ್ತಾಗಲಿಲ್ಲ. ಅವಳು ವ್ಯಸನಾಕ್ರಾಂತಳಾಗಿ ಮಂಕಾಗಿದ್ದ ಳೆಂಬುದನ್ನು ಮಾತ್ರ ಅವನು ಗಮನಿಸಿದ್ದನು. ಈ ಸಂದರ್ಭ ದಲ್ಲಿ ಇಬ್ಬರಲ್ಲಿ ಒಬ್ಬರಿಗಾದರೂ ಸಮಯೋಚಿತವಾದ ಕರ್ತವ್ಯ ವೇನೆಂದು ತಿಳಿಯುವಂತಹ ಅನುಭವವಿರಲಿಲ್ಲ.

ಅನನ್ಯಭಾವದಿಂದ ತಮ್ಮ ತಮ್ಮಲ್ಲಿ ಮನಮುಟ್ಟುವ ಪ್ರೀತಿ

ಯನ್ನು ವಿಸ್ತರಿಸಿ, ಪರಸ್ಪರ ಹಿತಕ್ಕಾಗಿಯೇ ಇಷ್ಟು ದಿನಗಳು ಒಟ್ಟಿಗೆ ಜೊತೆಯಲ್ಲಿದ್ದ ಇವರು, ಒಬ್ಬರಿಗೊಬ್ಬರು ಶತ್ರುಗಳಾಗಿರುವಂತೆ ಅವರಿಗೇ ಕಂಡಿತು; ಆದರೂ ಯಾರೊಬ್ಬರೂ ಅದನ್ನು ಉಚ್ಚರಿಸಲೂ ಇಲ್ಲ; ಕಠಿಣ ಮನೋಭಾವವನ್ನೂ ಹೊಂದಿರಲಿಲ್ಲ; ಮುಗುಳ್ನಗೆಯಿಂದ ಮಾತ್ರ ಸುಮ್ಮನಿದ್ದರು.

ಹೀಗೆ ಇವರ ಜೀವಿತವು ಕ್ರಮ ಕ್ರಮವಾಗಿ ದುಃಖಮಯವಾಗುತ್ತ ಬಂತು. ಇವರಿಗೆ ಒಂದು ಚಾಪಲ್ಯವು ಮಾತ್ರವಿತ್ತು. ಇದು, ಮೊದಲು ಇವರಿಗೆ ಒಂದು ವಿನೋದವಾಗಿತ್ತು. ಅದೇನೆಂದರೆ; ಹಸಿದಿದ್ದವರಿಗೆ ರೊಟ್ಟಿಯನ್ನೂ, ಚಳಿಯಲ್ಲಿ ನಡುಗುವವರಿಗೆ ಬಟ್ಟೆಗಳನ್ನೂ, ತೆಗೆದುಕೊಂಡು ಹೋಗಿ ಕೊಡುವುದು. ಈ ಕಾರ್ಯದಲ್ಲಿ ಕೋಸೆಟ್ಟಳು ಜೀನ್ ವಾಲ್ಜೀನನ ಜೊತೆಯಲ್ಲಿಯೇ ಅನೇಕಾವೃತ್ತಿ ಬಡವರಿದ್ದೆಡೆಗಳಿಗೆ ಹೋಗಿ ಬರುತ್ತಿದ್ದಳು. ಆ ಸಂದರ್ಭದಲ್ಲಿ ಇವರಿಬ್ಬರಿಗೂ ತಮ್ಮ ಪೂರ್ವದ ಮನಸ್ಸಂತೋಷವು ಸ್ವಲ್ಪ ಮಟ್ಟಿಗೆ ಉಳಿದಿತ್ತು. ಕೆಲವು ವೇಳೆ ಅವರು ಅನೇಕ ಮಂದಿಯ ದುಃಖಗಳನ್ನು ನಿವಾರಿಸಿ, ಅನೇಕ ಮಕ್ಕಳಿಗೆ ಬಟ್ಟೆಗಳನ್ನು ಕೊಟ್ಟು ಒಳ್ಳೆಯ ಕಾರ್ಯಗಳನ್ನು ಮಾಡಿದಾಗ ಕೋಸೆಟ್ಟಳು ಸಾಯಂಕಾಲದಲ್ಲಿ ಸ್ವಲ್ಪ ಸಂತೋಷವಾಗಿರುತ್ತಿದ್ದಳು. ಈ ಕಾಲದಲ್ಲಿಯೇ ಅವರು ಜಾಂಡ್ರೆಟ್ಟನ ಗವಿಯಂತಿದ್ದ ಮನೆಗೆ ಹೋದುದು.

ಅಲ್ಲಿಗೆ ಹೋಗಿಬಂದ ಮಾರನೆಯ ದಿನ, ಪ್ರಾತಃಕಾಲದಲ್ಲಿ, ಜೀನ್ ವಾಲ್ಜೀನನು ಸ್ವಾಭಾವಿಕವಾದ ಶಾಂತಭಾವದಿಂದ ಮನೆಯಲ್ಲಿ ಕುಳಿತ್ತಿದ್ದನು. ಆದರೆ ಅವನ ಎಡದೋಳಿನ ಮೇಲೆ ಒಂದು ದೊಡ್ಡ ಗಾಯವಾಗಿ, ಅದು ಬಹಳ ಉರಿಯುತ್ತಲೂ ನಂಜೇರಿದ ಸುಟ್ಟ ಗಾಯದಂತೆಯೂ ಇತ್ತು. ಇದರ ಕಾರಣವನ್ನು ಇವನು ಯಾವುದೋ ಬೇರೆ ರೀತಿಯಿಂದ ವಿವರಿಸಿ ಹೇಳಿದನು. ಈ ಗಾಯದ ತಾಪದಿಂದ ಒಂದು ತಿಂಗಳಿಗಿಂತಲೂ ಹೆಚ್ಚು ದಿನಗಳವರೆಗೆ ಇವನು ಜ್ವರ ಬಂದು ಮನೆಯನ್ನು ಬಿಟ್ಟು ಹೊರಡಲವಕಾಶವಿಲ್ಲದೆ ಬಿದ್ದಿದ್ದನು. ವೈದ್ಯನಿಗೆ ಕಾಣಿಸಿಕೊಳ್ಳಲು ಇವನು ಇಷ್ಟಪಡಲಿಲ್ಲ.

ಕೋಸೆಟ್ಟಳು ಬಲಾತ್ಕರಿಸಿದಾಗ, 'ನಾಯಿಗಳಿಗೆ ವೈದ್ಯಮಾಡು ವರನ್ನು ಕರೆ,' ಎನ್ನುತ್ತಿದ್ದನು.

ದೇವಯೋಗ್ಯವಾದ ದಯೆಯಿಂದಲೂ ಪರಮ ಸಂತೋಷ ದಿಂದಲೂ ಕೋಸೆಟ್ಟಳು ಅವನಿಗೆ ಉಪಕಾರಿಣಿಯಾಗಿ ನಿಂತು, ಹಗಲೂ ಇರುಳೂ ಅವನ ಗಾಯವನ್ನು ತೊಳೆದು, ಔಷಧ ಹಾಕಿ ಕಟ್ಟುತ್ತಿದ್ದಳು. ಈಗ ಜೀನ್ ವಾಲ್ಜೀನನಿಗೆ ತನ್ನ ಪೂರ್ವದ ಸುಖವೇ ಮರಳಿ ಬಂದಂತೆಯೂ, ತನ್ನ ಭೀತಿಯೂ, ಕಾತರ ದುಃಖ ಗಳೂ ನಿವಾರಣೆಯಾದಂತೆಯೂ ತೋರಿತು. ಅವನು ಕೋಸೆಟ್ಟ ಳನ್ನು ನೋಡಿ, 'ಆಹಾ! ಎಂತಹ ಒಳ್ಳೆಯ ಗಾಯ! ಎಷ್ಟು ದಯಾಮಯವಾದ ಗಾಯ!' ಎನ್ನುತ್ತಿದ್ದನು.

ತನ್ನ ತಂದೆಯು ಅಸ್ವಸ್ಥನಾಗಿದ್ದುದರಿಂದ, ಕೋಸೆಟ್ಟಳು ಬೇಸಗೆಯಲ್ಲಿ ತಾನು ವಾಸಿಸುತ್ತಿದ್ದ ಮನೆಯನ್ನು ತ್ಯಜಿಸಿ, ಚಿಕ್ಕದಾದ ಈ ಮನೆಯೂ ಹಿತ್ತಲೂ ಇವೇ ತನಗೆ ಹಿತವೆಂದು ತಿಳಿದುಕೊಂಡಳು. ಸಾಮಾನ್ಯವಾಗಿ ತನ್ನ ಕಾಲವೆಲ್ಲವನ್ನೂ ಅವಳು ಜೀನ್ ವಾಲ್ಜೀನನ ಬಳಿಯಲ್ಲಿಯೇ ಕಳೆಯುತ್ತ, ಅವನಿಗೆ ಬೇಕಾದ ಪುಸ್ತಕಗಳನ್ನು ಓದಿ ಹೇಳುತ್ತಿದ್ದಳು. ಒಟ್ಟಿನಲ್ಲಿ ಪ್ರಯಾಣಗಳ ಸಂಬಂಧವಾದ ಪುಸ್ತಕಗಳೇ ಹೆಚ್ಚು. ಜೀನ್ ವಾಲ್ಜೀನನಿಗೆ ಇದೊಂದು ಪ್ರತ್ಯೇಕ ಜನ್ಮವೇ ಆದಂತೆ ಇತ್ತು. ಅವನ ಸಂತೋಷವು ಅನಿರ್ವಚನೀಯವಾದ ಒಂದು ಅದ್ಭುತ ಕಳೆಯಿಂದ ಕೂಡಿತ್ತು. ಲಕ್ಸಂಬರ್ಗ್ ಕಡೆಯ ವಿಚಾರವೂ, ಆ ಅಪರಿಚಿತನಾದ ತರುಣ ಸಂಚಾರಿಯ ವಿಷಯವೂ ಕೋಸೆಟ್ಟಳ ಮನಸ್ಸಿನ ದುಗುಡವೂ, ಈ ಮೇಘಾವರಣಗಳೆಲ್ಲವೂ ಅವನ ಆತ್ಮ ಸಂತೋಷದ ಮುಂದೆ ಮಾಯವಾದುವು. ಈಗ ಅವನು ತನ್ನಲ್ಲಿ ತಾನು, 'ನಾನು ಅವೆಲ್ಲವನ್ನೂ ಕುರಿತು ಚಿಂತಿಸುತ್ತಿದ್ದೆನಲ್ಲಾ, ನಾನೆಂತಹ ಹುಚ್ಚು ಮುದುಕ!' ಎಂದುಕೊಂಡನು.

ವಸಂತ ಕಾಲವು ಬಂತು. ಈ ಸಮಯದಲ್ಲಿ ಉಪವನವು ಆಶ್ಚರ್ಯಕರವಾದ ಸೊಬಗಿನಿಂದ ಕಂಗೊಳಿಸುತ್ತಿತ್ತು. ಜೀನ್

ವಾಲ್ಜೀನನು ಕೋಸೆಟ್ಟಳನ್ನು ನೋಡಿ, 'ನೀನು ಅಲ್ಲಿಗೆ ಹೋಗುವುದೇ ಇಲ್ಲವಲ್ಲಾ! ನೀನು ಆ ಉಪವನದಲ್ಲಿ ಸಂಚರಿಸಿದರೆ ನನಗೆಷ್ಟೋ ಆನಂದವಾಗುವುದು,' ಎನ್ನಲು, ಕೋಸೆಟ್ಟಳು 'ನಿನ್ನ ಇಷ್ಟದಂತೆ ಆಗಲಿ, ಅಪ್ಪಾ!' ಎಂದಳು.

ತನ್ನ ತಂದೆಯ ಮಾತನ್ನು ನಡೆಯಿಸುವುದಕ್ಕಾಗಿ, ಅವಳು ಉಪವನದಲ್ಲಿ ಸಂಚಾರ ಹೋಗುವುದಕ್ಕೆ ಆರಂಭಿಸಿದಳು. ಅನೇಕಾವೃತ್ತಿ ಒಂಟಿಯಾಗಿಯೇ ಹೋಗುತ್ತಿದ್ದಳು. ಏತಕ್ಕೆಂದರೆ, ಹಿಂದೆಯೇ ಸೂಚಿಸಿದಂತೆ, ತನ್ನನ್ನು ಹೆಬ್ಬಾಗಿಲಿನಿಂದ ಯಾರಾದರೂ ನೋಡಿಯಾರೆಂಬ ಭೀತಿಯಿಂದ ಜೀನ್ ವಾಲ್ಜೀನನು ಅಲ್ಲಿಗೆ ಹೋಗುತ್ತಲೇ ಇರಲಿಲ್ಲ.

ಇದೇ ಏಪ್ರಿಲ್ ತಿಂಗಳಲ್ಲಿ ಒಂದು ದಿನ, ಸಂಧ್ಯಾಕಾಲದಲ್ಲಿ, ಜೀನ್ ವಾಲ್ಜೀನನು ಎಲ್ಲಿಯೋ ಹೊರಗೆ ಹೊರಟು ಹೋಗಿದ್ದನು. ಕೋಸೆಟ್ಟಳು ಸೂರ್ಯನು ಮುಳುಗಿದ ಮೇಲೆ ಉಪವನಕ್ಕೆ ಹೋದಳು. ಗಿಡಗಳ ಕೊಂಬೆಗಳು ಬಹಳ ತಗ್ಗಾಗಿ ಬೆಳೆದಿದ್ದುದರಿಂದ ಅವಳು ಅವುಗಳನ್ನು ಆಗಾಗ ತನ್ನ ಕೈಗಳಿಂದ ಓರೆಯಾಗಿ ನೂಕುತ್ತ ಆ ಕೊಂಬೆಗಳ ಕೆಳಗಡೆಯಲ್ಲಿ ಸಂಚರಿಸುತ್ತಿದ್ದಳು. ಅನಂತರ ಕುಳಿತುಕೊಳ್ಳಲು ಮಾಡಿರುವ ಪೀಠಗಳಿರುವ ಸ್ಥಳಕ್ಕೆ ಬಂದು ಒಂದು ಪೀಠದಮೇಲೆ ಕುಳಿತುಕೊಂಡಳು. ಅಕಸ್ಮಿಕವಾಗಿ ತನ್ನ ಹಿಂದೆ ಯಾರೋ ನಿಂತಿರುವಂತೆ ಅವಳಿಗೆ ತೋರಿತು. ತಟ್ಟನೆ ಹಿಂದಿರುಗಿ ಅವಳು ಮೇಲಕ್ಕೆ ಎದ್ದಳು. ಅವನೇ! ತಲೆಗೆ ಟೋಪಿಯು ಇರಲಿಲ್ಲ. ಕಳಾಹೀನನಾಗಿಯೂ ಕೃಶನಾಗಿಯೂ ಇದ್ದನು.

ಕೋಸೆಟ್ಟಳು ಇನ್ನೇನು ಮೂರ್ಛೆ ಬೀಳುವಷ್ಟರಲ್ಲಿದ್ದಳು. ಕೂಗಿಕೊಳ್ಳಲಿಲ್ಲ, ಅನಂತರ ಅವಳಿಗೆ ಅವನ ಧ್ವನಿಯು ಕೇಳಿಸಿತು. ಆ ಧ್ವನಿಯನ್ನು ಅವಳು ಹಿಂದೆ ಎಂದೂ ಕೇಳಿರಲಿಲ್ಲ. ಎಲೆಗಳ ಮೊರಮೊರ ಶಬ್ದದಲ್ಲಿ, 'ನನ್ನನ್ನು ಕ್ಷಮಿಸು; ನಾನು ಬಂದಿರುವೆನು, ನನ್ನ ಹೃದಯವು ಸಿಡಿದು ಒಡೆಯುತ್ತಿರುವುದು.

ಈ ಸ್ಥಿತಿಯಲ್ಲಿ ನಾನು ಜೀವಿಸಿರಲಾರದೆ ಇಲ್ಲಿಗೆ ಬಂದೆನು. ನೀನು ನನ್ನ ಗುರುತನ್ನಾದರೂ ಹಿಡಿಯುವೆಯಾ? ನನ್ನನ್ನು ನೋಡಿ ಹೆದರಬೇಡ. ನೀನಿರುವ ಮನೆಯ ಕಿಟಿಕಿಯಲ್ಲಿ ಇಣುಕಿ, ನಿನ್ನನ್ನು ಹತ್ತಿರದಲ್ಲಿ ನೋಡಬೇಕೆಂಬ ಆಶೆಯಿಂದ ಹೀಗೆ ರಾತ್ರಿಯಲ್ಲಿ ನಾನು ಇಲ್ಲಿಗೆ ಬಂದೆನು. ನೋಡು, ನೀನೇ ನನ್ನ ಭಾಗದ ಅಪ್ಸರೋರಮಣಿಯು; ನಾನು ಆಗಾಗ ಬರಲು ಅವಕಾಶ ಕೊಡು. ನಿನ್ನನ್ನು ಬಿಟ್ಟು ನಾನು ಜೀವಿಸಿರಲಾರೆ. ನನ್ನ ಪ್ರೇಮವು ನಿನ್ನ ಮನವುಟ್ಟಿದರೆ ಸಾಕು. ನಾನು ನಿನ್ನೊಡನೆ ಮಾತನಾಡುತ್ತಿರುವೆನು; ಏನನ್ನು ಹೇಳುತ್ತಿರುವೆನೆಂಬುದು ನನಗೇ ತಿಳಿಯದು; ನನ್ನನ್ನು ಮನ್ನಿಸು. ಒಂದು ವೇಳೆ ಇದರಿಂದ ನಿನಗೆ ಅಸಹ್ಯವಾಗಿ ಕೋಪ ಬರುವುದೋ ಏನೋ! ನಿಜವಾಗಿಯೂ ನಾನು ನಿನಗೆ ಕೋಪ ಬರುವಂತೆ ಮಾಡಿರುವೆನೇ?' ಎಂದು ಮೆಲ್ಲನೆ ಅವನು ಮಾತನಾಡಿದುದು ಕೇಳಿಸಿತು.

'ಅಯ್ಯೋ!' ಎಂದು ಹೇಳಿ, ಅವಳು ತನ್ನ ಪೀಠದ ಮೇಲೆ ಕುಸಿದು ಬಿದ್ದು, ಮರಣಾವಸ್ಥೆಯಲ್ಲಿದ್ದಂತೆ ಕಂಡಳು.

ಅವನೂ ಆ ಪೀಠದ ಮೇಲೆ, ಅವಳ ಪಕ್ಕದಲ್ಲಿಯೇ ಬಿದ್ದು ಬಿಟ್ಟನು. ಮುಂದೆ ಮಾತೇ ನಿಂತಿತು. ಗಗನದಲ್ಲಿ ನಕ್ಷತ್ರಗಳು ಒಂದೊಂದಾಗಿ ಥಳಗುಟ್ಟಲು ಆರಂಭಿಸಿದ್ದುವು. ಅವರಿಬ್ಬರ ತುಟಿಗಳೂ ಪರಸ್ಪರ ಸಂಧಿಸಿದುವಲ್ಲಾ! ಅದು ಹೇಗೆ? ಹಕ್ಕಿಯು ಹಾಡುವುದಲ್ಲಾ! ಅದು ಹೇಗೆ? ಮಂಜು ಕರಗುವುದಲ್ಲಾ! ಅದು ಹೇಗೆ? ಗುಲಾಬಿ ಹೂವು ಅರಳುವುದಲ್ಲಾ! ಅದು ಹೇಗೆ? ಮೇ ತಿಂಗಳಲ್ಲಿ ಲತೆಗಳು ಪುಷ್ಪಿತವಾಗುವುವಲ್ಲಾ! ಉಷಃಕಾಲವು, ಗುಡ್ಡಗಳ ಮೇಲೆ ಅದಿರುತ್ತಿರುವಂತೆ ಕಾಣುವ ಶಿಖರದ ಮೇಲೆ ಕರಿಯ ಬಣ್ಣದ ವೃಕ್ಷಗಳ ಹಿಂದೆ ಶುಭ್ರವಾದ ಕಾಂತಿಯನ್ನು ಪಸರಿಸುವುದಲ್ಲಾ! ಅದು ಹೇಗೆ? ಇದೂ ಹಾಗೆಯೇ?

ಒಂದೇ ಒಂದು ಮುತ್ತು, ಅಷ್ಟೆ!

ಅವರಿಬ್ಬರಿಗೂ ನಡುಕ ಹತ್ತಿತು. ಇಬ್ಬರೂ ಕತ್ತಲೆಯಲ್ಲಿ

ತೊಳೆಯುವ ಕಣ್ಣುಗಳಿಂದ ಪರಸ್ಪರ ನೋಡಿದರು.

ಇನ್ನೂ ರಾತ್ರಿಯ ಮೊದಲನೆಯ ಯಾಮವೆಂತಲಾಗಲಿ, ತಣ್ಣಗಿರುವ ಬಂಡೆಯೆಂಬುದಾಗಲಿ, ತೇವವಾದ ನೆಲವೆಂದಾಗಲಿ, ನೆನೆದ ಹುಲ್ಲೆಂದಾಗಲಿ, ಅವರ ಗೋಚರಕ್ಕೇ ಬರಲಿಲ್ಲ. ಅವರಿಬ್ಬರೂ ಒಬ್ಬರನ್ನೊಬ್ಬರು ನೋಡುತ್ತಿದ್ದರು. ಅವರ ಹೃದಯದಲ್ಲಿ ವಿಧವಿಧಾಲೋಚನೆಗಳು ತುಂಬಿ ತುಳುಕುತ್ತಿದ್ದುವು. ಅವರು ಒಬ್ಬರೊಬ್ಬರ ಕೈಗಳನ್ನು ಹಿಡಿದಿದ್ದರೆಂಬುದು ಅವರಿಗೇ ತಿಳಿಯದು.

ಕ್ರಮಕ್ರಮವಾಗಿ ಅವರು ಮಾತನಾಡಲಾರಂಭಿಸಿದರು. ಮಿತಿಮೀರಿದ ಆನಂದ ಉಕ್ಕಿ, ಮಾತನಾಡಿ ಕಡೆಗೆ ನಿಶ್ಶಬ್ದವಾಗಿ ನಿಂತರು. ಇದೇ ಪರಿಪೂರ್ಣಾನಂದ ಎರಡು ಹೃದಯಗಳೂ ಕರಗಿ ದ್ರವವಾಗಿ ಒಂದರೊಳಗೊಂದು ಮಿಳಿತವಾದುವು. ಕಡೆಗೆ, ಒಂದು ಗಂಟೆಯ ಕಡೆಯಲ್ಲಿ ಅವನ ಆತ್ಮವು ಅವಳಲ್ಲಿಯೂ, ಅವಳ ಆತ್ಮವು ಅವನಲ್ಲಿಯೂ ನೆಲೆಸಿದ್ದಿತು. ಅವರು ಮತ್ತೆ ಮತ್ತೆ ಒಬ್ಬರನ್ನೊಬ್ಬರು ನೋಡಿ, ಆನಂದದಿಂದ ಪರವಶರಾದರು. ಒಬ್ಬರನ್ನೊಬ್ಬರು ತಮ್ಮ ಮೋಹತೇಜಸ್ಸಿನಿಂದ ಕಣ್ಣು ಮುಚ್ಚುವಂತೆ ಮಾಡಿದರು.

ಅಲ್ಲಿಂದ ಮುಂದೆ, ಪ್ರತಿ ದಿನ ರಾತ್ರಿಯೂ ಕೋಸೆಟ್ಟಳು ಉಪವನದ ಸಂಚಾರಕ್ಕೆ ಬರುತ್ತಿದ್ದಳು. ಪ್ರತಿ ರಾತ್ರಿಯೂ ಮೇರಿಯಸ್ಸನೂ ಅಲ್ಲಿ ಅವಳನ್ನು ಕಾಣುತ್ತಿದ್ದನು. ಇವರ ಪರಸ್ಪರ ಭೇಟಿಯ ವಿಷಯವಾಗಿ ಜೀನ್ ವಾಲ್ಜೀನನಿಗೆ ಮಾತ್ರ ಏನೊಂದೂ ಗೊತ್ತೇ ಇಲ್ಲ.

---

## ೧೬

ಹೀಗೆ ಆರು ವಾರಗಳು ಕಳೆದ ಮೇಲೆ ಒಂದು ದಿನ ಮೇರಿಯಸ್ಸನು ಕೋಸೆಟ್ಟಳನ್ನು ನೋಡಲು ಬಂದಾಗ ಅವಳು ಅವನನ್ನು ಕುರಿತು, 'ಈ ದಿನ ಪ್ರಾತಃಕಾಲ ನಮ್ಮ ತಂದೆಯು ನನ್ನನ್ನು ನೋಡಿ, ತನಗೇನೋ ಕೆಲಸವಿರುವುದರಿಂದ ನಾವು ಇಲ್ಲಿಂದ ಹೊರಟುಹೋಗಬೇಕಾದೀತೆಂತಲೂ, ಅದಕ್ಕಾಗಿ ಎಲ್ಲವನ್ನೂ ಸಿದ್ಧಪಡಿಸಿಕೊಂಡಿರಬೇಕೆಂತಲೂ ಹೇಳಿದನು,' ಎಂದಳು.

ಮೇರಿಯಸ್ಸನು ಆಪಾದಮಸ್ತಕವೂ ಅದಿರಿ ಅಲ್ಲಾಡಿ ಹೋದನು.

ನಾವು ನಮ್ಮ ಜೀವಿತದ ಅಂತ್ಯದಲ್ಲಿರುವಾಗ, ಸಾಯುವುದೆಂದರೆ ಹೊರಟುಹೋಗುವುದೆಂದರ್ಥ. ಜೀವಿತದ ಆದಿಯಲ್ಲಿರುವಾಗ, ಹೊರಟುಹೋಗುವುದೆಂದರೆ ಸಾಯುವುದೆಂದರ್ಥ.

ಮೇರಿಯಸ್ಸನು ಎಚ್ಚತ್ತನು. ಈ ಆರು ವಾರಗಳೂ ಮೇರಿಯಸ್ಸನು, ನಾವು ಕಂಡಂತೆ, ಜೀವಿತದ ಹೊರ ಅಂಚಿನಲ್ಲಿದ್ದನು. ಈ 'ಹೊರಟುಹೋಗು'ವದೆಂಬ ಮಾತು ಈಗ ಅವನನ್ನು ಜೀವಿತದ ಒಳಕ್ಕೆ ತಳ್ಳಿತು.

ಅವನಿಗೆ ಈಗ ಏನು ಹೇಳಲೂ ತೋರಲಿಲ್ಲ.

ಕೋಸೆಟ್ಟಳು, 'ನಾವೆಂತಹ ಅವಿವೇಕಿಗಳು! ಮೇರಿಯಸ್, ನನಗೆ ಒಂದು ಆಲೋಚನೆಯು ಹೊಳೆಯುವುದು,' ಎಂದಳು.

'ಏನು?'

'ಹೋಗಬೇಕಾದರೆ ಹೋಗೋಣ! ಎಲ್ಲಿಗೆಂಬುದನ್ನು ನಾನು ನಿನಗೆ ತಿಳಿಸುವೆನು. ನಾನಿರುವ ಕಡೆಗೆ ನೀನೂ ಬಂದರೆ ಆಯಿತು.'

'ಏನು? ನಿನ್ನ ಸಂಗಡ ಬರುವುದೇ? ನಿನಗೇನು ಹುಚ್ಚೇ? ಅದಕ್ಕೆ ಎಷ್ಟು ಹಣ ಬೇಕಾಗುವುದು! ನನ್ನಲ್ಲಿಯಾದರೋ ಒಂದು ಕಾಸೂ ಇಲ್ಲ! ನೀವು ಇಂಗ್ಲೆಂಡಿಗೆ ಹೋಗುವಿರೆಂದೆಯಾ? ನಾನು

ನನ್ನ ಸ್ನೇಹಿತನೊಬ್ಬನಿಗೆ ಹತ್ತು ಲೂಯಿಗಳಿಗಿಂತಲೂ ಹೆಚ್ಚು ಹಣವನ್ನು ಕೊಡಬೇಕಾಗಿದೆ. ಅವನು ಯಾರೆಂಬುದು ನಿನಗೆ ತಿಳಿಯದು. ನೀನು ನನ್ನನ್ನು ರಾತ್ರಿ ಕಾಲದಲ್ಲಿ ಮಾತ್ರ ನೋಡುತ್ತ, ನನ್ನಲ್ಲಿ ಮೋಹಗೊಂಡಿರುವೆ; ಹಗಲಲ್ಲಿ ನನ್ನನ್ನು ನೀನು ನೋಡಿದುದೇ ಆದರೆ, ನೀನೇ ನನಗೆ ಒಂದು ಸೌವನ್ನು ಭಿಕ್ಷ ವಿಕ್ಕುತ್ತಿದ್ದೆ. ಇಂಗ್ಲೆಂಡಿಗೆ ಹೋಗುವುದೇ? ಆಹಾ! ಹೋಗಲು ರಹದಾರಿಯನ್ನು ಪಡೆಯುವ ಬಗೆ ತಾನೇ ಹೇಗೆ?'

ಎಂದು ಹೇಳಿ, ತಲೆಯ ಮೇಲೆ ತನ್ನ ಎರಡು ತೋಳುಗಳನ್ನೂ ಇಟ್ಟುಕೊಂಡು, ಬಳಿಯಲ್ಲಿದ್ದ ಮರದ ತೊಗಟೆಗೆ ತನ್ನ ಹಣೆಯನ್ನು ಒರಗಿಸಿ, ನಿಂತುಕೊಂಡನು. ಮರಕ್ಕೆ ಒರಗಿದ್ದ ತನ್ನ ಚರ್ಮವು ಗೀಚುವುದೆಂದಾಗಲಿ, ತನ್ನ ಮೆದುಳಿನಲ್ಲಿ ಒದಗಿದ್ದ ಚಿಂತೆಯಿಂದುಂಟಾದ ದೇಹದಾಹವನ್ನಾಗಲಿ ಅವನು ಗಮನಿಸದೆ, ಸ್ತಬ್ಧನಾಗಿ, ನಿರಾಶೆಯ ಪ್ರತಿಮೆಯಂಬಂತೆ ಕೆಳಗುರುಳಿ ಬೀಳುವ ಸ್ಥಿತಿಯಲ್ಲಿದ್ದನು.

ಬಹಳ ಹೊತ್ತು ಹೀಗೆಯೇ ಕಳೆಯಿತು. ಇಂತಹ ಮಹಾ ವ್ಯಥೆಯಲ್ಲಿ ಎಂದೆಂದಿಗೂ ಹೀಗೆಯೇ ನಿಂತಿದ್ದರೂ ಅದಕ್ಕೆ ಕೊನೆಯೇ ಇಲ್ಲ. ಕಟ್ಟಕಡೆಗೆ ತಿರುಗಿ ನೋಡಿದನು. ಅವನ ಹಿಂದಣಿಂದ, ಉಸಿರು ಕಟ್ಟಿದ ಶಬ್ದದಂತೆ ಮೃದುವಾದ ಮತ್ತು ವ್ಯಸನಕರವಾದ ಒಂದು ಧ್ವನಿಯು ಕೇಳಿಸಿತು. ಅದು ಕೋಸೆಟ್ಟಳು ಬಿಕ್ಕಿ ಬಿಕ್ಕಿ ಅಳುತ್ತಿದ್ದ ಶಬ್ದವು. ಮೇರಿಯುಸ್ಸನು ಚಿಂತೆಯಲ್ಲಿ ಮುಳುಗಿರುವಾಗ, ಸುಮಾರು ಎರಡು ಗಂಟೆಗಳ ಕಾಲ ಅವಳು ಅಳುತ್ತಲೇ ಇದ್ದಳು.

ಅವನು ಅವಳ ಕೈಯನ್ನು ಹಿಡಿದು, 'ಕೋಸೆಟ್, ನಾನು ಯಾರಿಗೂ ಪ್ರಮಾಣ ಮಾಡಿ ಮಾತುಕೊಟ್ಟವನಲ್ಲ. ಏತಕ್ಕೆಂದರೆ ಪ್ರಮಾಣವಾಕ್ಯವೆಂದರೆ ನನಗೆ ಭಯವಾಗುವುದು. ನಮ್ಮ ತಂದೆಯು ನನ್ನ ಎದುರಿನಲ್ಲಿಯೇ ಇರುವಂತೆ ನನ್ನ ಮನಸ್ಸಿಗೆ

ತೋರುವುದು. ಈಗ ಪರಮ ಪವಿತ್ರವೆಂದು ನಾನು ಭಾವಿಸಿರುವ ನನ್ನ ಪ್ರಮಾಣ ವಚನವನ್ನು ನಿನ್ನೊಡನೆ ಹೇಳುವೆನು. ಕೇಳು, ನೀನು ಹೊರಟುಹೋದರೆ ನಾನು ಸಾಯುವುದೇ ನಿಜ. ಆದರೆ ಜೀವಿಸಿರಬೇಕೆಂದೇ ನನ್ನ ಸಂಕಲ್ಪ,' ಎಂದನು

ಈ ಸಮಯದಲ್ಲಿ ಕೋಸೆಟ್ಟಳು ಮತ್ತೆ ಅವನ ಕಣ್ಣುಗಳನ್ನೇ ನೋಡುತ್ತಿದ್ದು, ಅವನನ್ನು ಕುರಿತು, 'ಮೇರಿಯಸ್', ನಿನ್ನ ಭಾವವೇನು ಹೇಳು, ನಿನ್ನ ಮನಸ್ಸಿನಲ್ಲಿ ಏನೋ ಇರುವುದು, ಅದನ್ನು ಹೇಳು. ನನ್ನೊಡನೆ ಹೇಳು; ಹೇಳಿದರೆ ನಾನು ಈ ರಾತ್ರಿ ಸುಖವಾಗಿ ನಿದ್ರೆಮಾಡುವೆನು,' ಎಂದಳು.

'ನನ್ನ ಅಭಿಪ್ರಾಯವು ಇದು. ದೇವರು ನಮ್ಮಿಬ್ಬರನ್ನೂ ಅಗಲಿಸಲು ಇಷ್ಟಪಡುವನೆಂಬುದು ಅಸಂಭವ. ನೀನು ನಾಡಿದ್ದು ನನ್ನ ನಿರೀಕ್ಷಣೆಯಲ್ಲಿರು. ನಾನೊಂದು ಉಪಾಯವನ್ನು ಮಾಡಲು ಪ್ರಯತ್ನಿಸುವೆನು.'

'ಹಾಗಾದರೆ ನಾನು ಈಗಿನಿಂದಲೂ ನಿನ್ನನ್ನೇ ಧ್ಯಾನಿಸುತ್ತ ನಿನ್ನ ಪ್ರಯತ್ನದಲ್ಲಿ ನೀನು ಜಯಶಾಲಿಯಾಗುವಂತೆ ಅನುಗ್ರಹಿಸೆಂದು ದೇವರನ್ನು ಕುರಿತು ಪ್ರಾರ್ಥಿಸುವೆನು.'

'ನಾನೂ ಹಾಗೆಯೇ ಮಾಡುವೆನು.'

ಮೇರಿಯಸ್ಸನು ಹೊರಟುಹೋದ ಕೂಡಲೇ ಕೋಸೆಟ್ಟಳ ಕಣ್ಣಿಗೆ ಬೀದಿಯೆಲ್ಲವೂ ಶೂನ್ಯವಾಗಿ ಕಂಡಿತು.

ಮೇರಿಯಸ್ಸನು ತನ್ನ ತಲೆಯನ್ನು ಮರಕ್ಕೆ ಒರಗಿಸಿ ಆಲೋಚಿಸುತ್ತಿರುವ ಸಮಯದಲ್ಲಿ ಅವನ ಮನಸ್ಸಿಗೆ ಒಂದು ಆಲೋಚನೆಯು ಹೊಳೆದಿತ್ತು. ಪಾಪ! ಈ ಆಲೋಚನೆಯು ಅವಿವೇಕವಾದುದೆಂತಲೂ ಅಸಾಧ್ಯವೆಂತಲೂ ಅವನಿಗೇ ತೋರಿತು. ಅವನು ಕೇವಲ ನಿರಾಶನಾಗಿ ಈ ನಿರ್ಧರಮಾಡಿದುದು.

ಇದೇನೆಂದರೆ, ತನ್ನ ತಾತನನ್ನು ಕೇಳುವುದು. ಅದರಂತೆ ಹೋಗಿ ತನ್ನ ವಿವಾಹದ ವಿಚಾರವನ್ನು ಆತನೊಡನೆ ಪ್ರಸ್ತಾ

ಪಿಸಿದನು. ಆದರೆ ಅವನು ಹೇಳಿಕೊಂಡುದೆಲ್ಲವೂ ವಿಫಲ ವಾಯಿತು.

ತಾತನೂ, ಮೊಮ್ಮಗನೂ ಒಬ್ಬರನ್ನೊಬ್ಬರು ಸಮಂಜಸ ಮಾಡಿ ಒಪ್ಪಿಸಬೇಕೆಂದು ಬಹಳ ಪ್ರಯತ್ನಪಟ್ಟರು. ಆದರೆ ಪ್ರತಿ ಯೊಬ್ಬರಿಗೂ ಅತಿಶಯವಾದ ಹೆಮ್ಮೆ ಇದ್ದುದರಿಂದ ಯಾರೊಬ್ಬರೂ ತಮಗಿದ್ದ ಪ್ರೀತಿಯನ್ನು ತೋರಿಸಲು ಅವಕಾಶವಿರಲಿಲ್ಲ. ಮೇರಿ ಯುಸ್ಸನು ವಿವಾಹ ಮಾಡಿಕೊಳ್ಳಲು ಅಪ್ಪಣೆಯನ್ನು ಕೇಳಲು, ಖಂಡಿತವಾಗಿಯೂ ಒಪ್ಪದೆ, ಮುದುಕನು ತಿರಸ್ಕರಿಸಿದನು. ಆದರೆ ಮೇರಿಯುಸ್ಸನು ಮನೆಯನ್ನು ಬಿಟ್ಟು ಹೊರಟುಹೋದ ಒಡನೆಯೇ ಮುದುಕನಿಗೆ ಪಶ್ಚಾತ್ತಾಪ ಹುಟ್ಟಿ ಮೇರಿ ಯುಸ್ಸನನ್ನು ಹಿಂದಕ್ಕೆ ಕರೆತರಲು ಸೇವಕನನ್ನು ಕಳುಹಿಸಿ ದನು. ಕಾರ್ಯವು ಮಿಾರಿಹೋಗಿತ್ತು. ಮೇರಿಯುಸ್ಸನು ತನ್ನ ವಿಳಾಸದ ಸೂಚನೆಯನ್ನೂ ಸಹ ಕೊಡದೆ ಮಾಯವಾಗಿದ್ದನು.

ಅವನು ಮೊದಲು ತನ್ನ ನಿವಾಸಸ್ಥಳಕ್ಕೆ ಹೋಗಿ ಹಿಂದೆ ಜೇವರ್ಟನು ತನಗೆ ಕೊಟ್ಟಿದ್ದ ಎರಡು ಪಿಸ್ತೂಲುಗಳನ್ನು ತೆಗೆದು ಕೊಂಡನು. ಅವುಗಳಿಂದ ಏನು ಮಾಡಬೇಕೆಂಬುದನ್ನು ಮಾತ್ರ ಅವನು ಆಲೋಚಿಸಿರಲಿಲ್ಲ. ಅನಂತರ ಕೋಸೆಟ್ಟಳ ಉಪವನಕ್ಕೆ ಹೋದನು. ಅಲ್ಲಿ ಯಾರೂ ಇರಲಿಲ್ಲ. ಮನೆಗೆ ಬೀಗಹಾಕಿತ್ತು. ನಿರಾಶನಾಗಿ ನಿಂತಿರುವಲ್ಲಿ, ಅಲ್ಲಿ ಹೋಗುತ್ತಿದ್ದವರು ಯಾರೋ ಕೂಗಿಕೊಂಡ ಶಬ್ದವು ಇವನಿಗೆ ಕೇಳಿಸಿತು. ಯಾವುದೋ ಬೀದಿಯಲ್ಲಿ ಜಗಳವು ನಡೆಯುತ್ತಿರುವುದೆಂತಲೂ ಮೇರಿಯುಸ್ಸನ ಸ್ನೇಹಿತರು ಅವನ ಸಹಾಯವನ್ನಪೇಕ್ಷಿಸುದರೆಂತಲೂ ಅವರು ಕೂಗಿದರು.

ಆ ದಿನ, ನೆಪೋಲಿಯನ್ ಚಕ್ರವರ್ತಿಯ ಹಳೆಯ ಸೇನಾ ಪತಿಯೊಬ್ಬನು ಮೃತನಾಗಿ ಆತನ ಶವದ ನೆರವಣಿಗೆಯು ಬೀದಿ ಯಲ್ಲಿ ಹೋಗುತ್ತಿರುವಾಗ ಈ ಯುದ್ಧವು ಪ್ರಾರಂಭವಾಗಿತ್ತು. ಫ್ರಾನ್ಸ್ ದೇಶವು ಮತ್ತೆ ರಾಜನಾಳ್ವಿಕೆಯಲ್ಲಿತ್ತು. ಆದರೆ ಬಹು

ಮಂದಿ ಪ್ರಜೆಗಳು ಪ್ರಜಾಪ್ರಭುತ್ವ ಪಕ್ಷವನ್ನೇ ಅನುಮೋದಿಸುವವರಾಗಿದ್ದರು. ಈ ಕಾರಣದಿಂದ ಆ ಶವ ಮೆರವಣಿಗೆಯ ಹಿಂದೆ ಬಹು ಮಂದಿ ಜನರು ಹೋಗುತ್ತಿದ್ದರು. ಏನೂ ಅಪಾಯಕ್ರಿಯೆಗಳು ನಡೆಯದಂತೆ ನೋಡಿಕೊಳ್ಳಲು ಸರ್ಕಾರದವರು ಸಾವಿರಾರು ಮಂದಿ ಸಿಪಾಯಿಗಳನ್ನು ಕರೆಯಿಸಿದ್ದರು. ಜಗಳವು ಹೇಗೆ ಪ್ರಾರಂಭವಾಯಿತೆಂಬುದು ಯಾರಿಗೂ ಗೊತ್ತಾಗಲಿಲ್ಲ. ತುಪಾಕಿಯ ಗುಂಡುಗಳು ಹಾರಾಡಿದವು. ಸರ್ಕಾರದ ಸಿಪಾಯಿಗಳು ಪ್ರಜಾಪ್ರಭುತ್ವ ಪಕ್ಷದವರ ಕೈಗೆ ಸಿಕ್ಕಿಬಿದ್ದರು. ಇದು ಎರಡು ದಿನಗಳ ವರೆಗೆ ಮಾತ್ರ ನಡೆದ ಒಂದು ಸಣ್ಣ ಯುದ್ಧವೇ ಆಗಿತ್ತು. ಆದರೂ ಈ ಜಗಳದಲ್ಲಿ ರಕ್ತದ ಹೊಳೆಯು ಹರಿಯಿತು. ಈ ಸಮಯದಲ್ಲಿ, ಈ ಕಥೆಯಲ್ಲಿಯ ವ್ಯಕ್ತಿಗಳಿಗೆ ಸಂಬಂಧಪಟ್ಟ ಬಹು ಮುಖ್ಯವಾದ ವಿಷಯಗಳು ನಡೆದುವು.

ಮೋರಿಯಸ್ಸನು ತನ್ನ ಸ್ನೇಹಿತರನ್ನು ಆ ಪ್ಯಾರಿಸ್ ನಗರದ ಅತ್ಯಂತ ಜನಸಾಂದ್ರವಾದ ಒಂದು ಬೀದಿಯಲ್ಲಿ ನೋಡಿದನು. ಅವರು, ಎರಡು ಬೀದಿಗಳು ಸಂಧಿಸುವ ಸ್ಥಳದಲ್ಲಿ ಒಂದು ಮದ್ಯದ ಅಂಗಡಿಯಲ್ಲಿ ನಿಂತು, ತಮ್ಮ ರಕ್ಷಣೆಗೋಸ್ಕರ ಸಮಕೋನವಾಗಿ 'ಬ್ಯಾರಿಕೇಡ್ಸ್' ಎಂಬ ಅಡ್ಡಗೋಡೆಗಳನ್ನು ಕಟ್ಟುತ್ತಿದ್ದರು. ಸುಮಾರು ಐವತ್ತು ಮಂದಿ ಕೆಲಸಗಾರರು ಇವರಿಗೆ ಸಹಾಯಕರಾಗಿದ್ದರು. ಇವರಲ್ಲಿ ಕೆಲವರು ತುಪಾಕಿಗಳನ್ನು ಹಿಡಿದಿದ್ದರು. ಗೋಡೆಗಳನ್ನು ಕಟ್ಟಿದುದಾದ ಮೇಲೆ ಅಧಿಕಾರಿಯು ಪ್ರತಿಯೊಬ್ಬರಿಗೂ ಕೆಲವು ಬಂದೂಕಿನ ತೋಟಾಗಳನ್ನು ಕೊಟ್ಟು ಅವರವರ ಸ್ಥಾನಗಳನ್ನು ಗೊತ್ತುಮಾಡಿ ನಿಲ್ಲಿಸಿದನು. ಆಗ ಜೇವರ್ಟನು ಇವರ ಮಧ್ಯದಲ್ಲಿ ನಿಂತಿರುವನೆಂದು ಯಾರೋ ಗಮನಿಸಿ ನೋಡಿ, ಇವನು ಗೂಢಚಾರನೆಂದು ಅಧಿಕಾರಿಗೆ ತಿಳಿಸಿದರು. ಆ ಕ್ಷಣವೇ ಜೇವರ್ಟನನ್ನು ಹಿಡಿದರು. ಕೈಕಾಲುಗಳಿಗೆ ಬೇಡಿಗಳು ಬಿದ್ದುವು. ಸೊಂಟಕ್ಕೆ ಹಗ್ಗ ಹಾಕಿ ಆ ಅಂಗಡಿಯ ತಳಗಡೆಯ ಒಂದು ದೊಡ್ಡ ಕಂಬಕ್ಕೆ ಅವನನ್ನು ಬಿಗಿದು ಕಟ್ಟಿದರು.

ಆ ಅಧಿಕಾರಿಯು ಅವನನ್ನು ಕುರಿತು, 'ಈ ಅಡ್ಡ ಗೋಡೆಯು ಶತ್ರುಗಳ ವಶವಾಗುವುದಕ್ಕೆ ಹತ್ತು ನಿಮಿಷಗಳ ಮುಂಚಿತವಾಗಿ ನೀನು ಗುಂಡಿನ ಬಾಯಿಗೆ ತುತ್ತಾಗುವೆ,' ಎಂದನು.

ಮಧ್ಯರಾತ್ರಿಯ ಸಮಯಕ್ಕೆ ಸರ್ಕಾರದ ಸೈನಿಕರು ಈ ಅಡ್ಡಗೋಡೆಯುನ್ನು ಮುತ್ತಲು ಆರಂಭಿಸಿದರು. ಉಭಯ ಪಕ್ಷಗಳಲ್ಲಿಯೂ ಅನೇಕರು ಮೃತರಾಗಿಯೂ ಗಾಯಪಡೆದೂ ಬಿದ್ದರು. ಈ ಅಡ್ಡಗೋಡೆಯು ಶತ್ರುಗಳ ವಶವಾಗುವುದೆಂದು ಕಂಡುಬಂದಕೂಡಲೆ, ಮೇರಿಯುಸ್ಸನು ಅದರಮೇಲೆ ಒಂದು ಕರಿಯ ಮದ್ದಿನ ಪೀಪಾಯಿಯನ್ನಿಟ್ಟು, ಅದರಮೇಲೆ ಒಂದು ಪಂಜನ್ನು ಆಡಿಸುತ್ತ, 'ಹೊರಟು ಹೋಗಿ; ಇಲ್ಲವಾದರೆ ನಾನು ಈ ಗೋಡೆಯನ್ನೇ ಹಾರಿಸಿಬಿಡುತ್ತೇನೆ,' ಎಂದು ಕೂಗಿಕೊಂಡನು.

ಮುತ್ತುವುದಕ್ಕಾಗಿ ಬಂದಿದ್ದವರು ಸತ್ತವರನ್ನೂ ಗಾಯಪಟ್ಟವರನ್ನೂ ಅಲ್ಲಲ್ಲಿಯೇ ಬಿಟ್ಟು ದಿಕ್ಕುಪಾಲಾಗಿ ಒಂದು ಕ್ಷಣ ಮಾತ್ರದಲ್ಲಿ ಓಡಿಹೋದರು. ರಕ್ಷಣಾರ್ಥವಾಗಿ ಕಟ್ಟಿದ್ದ ಗೋಡೆಯು ಉಳಿಯಿತು.

ಸ್ವಲ್ಪ ಹೊತ್ತಿನ ಮೇಲೆ ಕೋಸೆಟ್ಟಳಿಂದ ಬಂದ ಒಂದು ಕಾಗದವು ಮೇರಿಯುಸ್ಸನ ಹಸ್ತಗತವಾಯಿತು. ಅದರಲ್ಲಿ ಹೀಗೆ ಬರೆದಿತ್ತು:

'ಪ್ರಿಯಾ! ಓ! ನಮ್ಮ ತಂದೆಯು ಈಗಲೇ ಇಲ್ಲಿಂದ ಹೊರಡಬೇಕೆಂದಿಷ್ಟಪಟ್ಟಿದ್ದಾನೆ. ನಾವು ಈ ದಿನ ರಾತ್ರಿ ರೂ ಡಿ ಎಲ್'ಹೋಂ ಆರಂ ಬೀದಿಯ, ೭ನೆಯ ನಂಬರು ಮನೆಯಲ್ಲಿರುತ್ತೇವೆ. ಇನ್ನು ಒಂದು ವಾರದೊಳಗಾಗಿ ಇಂಗ್ಲೆಂಡನ್ನು ಸೇರುವೆವು. ಕೋಸೆಟ್, ಜೂನ್ ೪ನೆಯ, ತಾರೀಖು.'

ಇದನ್ನು ನೋಡಿ ಅವನು ತನ್ನ ಜೇಬಿನ ಪುಸ್ತಕದಿಂದ ಒಂದು ಹಾಳೆಯನ್ನು ಹರಿದು ಅದರಲ್ಲಿ,

'ನಮ್ಮ ವಿವಾಹವು ಆಗದು. ನಾನು ನನ್ನ ತಾತನನ್ನು ಕೇಳಿದೆನು; ಅವನು ಒಪ್ಪಲಿಲ್ಲ. ನಾನು ಅದೃಷ್ಟಹೀನನು.

ನೀನೂ ಹಾಗೆಯೇ ಸರಿ. ನಾನು ನಿಮ್ಮ ಮನೆಗೆ ಆತುರನಾಗಿ ಓಡಿಹೋದೆ. ನೀನು ಅಲ್ಲಿರಲಿಲ್ಲ. ನಾನು ನಿನಗೆ ಕೊಟ್ಟ ಭಾಗ್ದಾನವನ್ನು ಒಲ್ಲೆಯಷ್ಟೆ! ಅದರಂತೆ ನಡೆಯುವೆನು. ನಾನು ಸಾಯುವೆನು. ನಾನು ನಿನ್ನನ್ನು ಮೋಹಿಸಿರುವೆನು. ನೀನು ಈ ಕಾಗದವನ್ನು ಓದುವಾಗ ನನ್ನ ಆತ್ಮವು ನಿನ್ನ ಬಳಿಯಲ್ಲಿದ್ದು ನಿನ್ನನ್ನು ನೋಡಿ ಮುಗುಳ್ನಗೆ ನಗುವುದು.'

ಎಂದು ಬರೆದು, ಕಾಗದವನ್ನು ಮಡಿಸಿ, ಹಾಗೆಯೇ ಒಂದು ನಿಮಿಷಕಾಲ ಆಲೋಚಿಸಿ, ಮತ್ತೆ ಪುಸ್ತಕವನ್ನು ತೆಗೆದು, ಅದೇ ಸೀಸದ ಕಡ್ಡಿಯಿಂದ ಮೊದಲನೆಯ ಪುಟದಲ್ಲಿ ಈ ಮುಂದಿನ ನಾಲ್ಕು ಪಙ್ಕ್ತಿಗಳನ್ನು ಬರೆದನು :

'ನನ್ನ ಹೆಸರು ಮೇರಿಯಸ್ ಪಾಂಟ್‌ಮರ್ಸಿ. ನನ್ನ ಶವವನ್ನು, ಮರಯಿಸ್‌ನಲ್ಲಿ ರೂ ಡೆಸ್ ಫೈಲ್ಸ್ ಡ್ಯೂ ಕಲ್ವೇರ್ ಬೀದಿಯಲ್ಲಿ, ೬ ನೇ ನಂಬರು ಮನೆಯಲ್ಲಿರುವ ನನ್ನ ತಾತ, ಮಾನ್ಸಿಯೂರ್ ಜಿಲ್ಲೆನಾರ್ಮಂಡ್ ಎಂಬಾತನಿಗೆ ತಲಪಿಸಿ.'

ಹೀಗೆ ಬರೆದು, ಕಾಗದವನ್ನು ಕೋಸೆಟ್ಟಳಿಗೆ ಕೊಡುವಂತೆ ಒಬ್ಬ ಆಳಿನ ಕೈಗೆ ಕೊಟ್ಟು ಕಳುಹಿಸಿದನು.

---

## ೧೭

ಎರಡು ದಿನಗಳ ಹಿಂದೆ ಜೀನ್ ವಾಲ್ಜೀನನಿಗೆ ಯಾರೋ ಒಂದು ಕಾಗದವನ್ನು ತಂದುಕೊಟ್ಟಿದ್ದರು. ಅದನ್ನು ತಂದವರ ಹೆಸರು ಅವನಿಗೆ ತಿಳಿಯದು. ಅದರಲ್ಲಿ 'ಈ ಸ್ಥಳವನ್ನು ಬಿಟ್ಟು ಹೊರಡು,' ಎಂದು ಮಾತ್ರ ಬರೆದಿತ್ತು. ಇದನ್ನು ಉದಾಸೀನ ಮಾಡಲು ಧೈರ್ಯವಿಲ್ಲದೆ, ಅವನು ಆ ಕೂಡಲೇ ಕೋಸೆಟ್ಟಳನ್ನೂ ಮನೆಯ ಪರಿಚಾರಿಣಿಯನ್ನೂ ಕರೆದುಕೊಂಡು ತನ್ನ ಮೂರನೆಯ ಮನೆಗೆ ಹೊರಟುಹೋದನು. ನಾವು ಹಿಂದೆ ಓದಿದ ಪತ್ರವನ್ನು ಮೇರಿಯಸ್ಸನಿಗೆ ಗುಟ್ಟಾಗಿ ಒಬ್ಬ ಆಳಿನ ಮೂಲಕ ಕಳುಹಿಸಿಕೊಡುವುದಕ್ಕೆ ಮಾತ್ರ ಕೋಸೆಟ್ಟಳಿಗೆ ಅವಕಾಶ ದೊರಕಿತು.

ಸೂಚಿತವಾಗಿದ್ದ ಅಪಾಯದಿಂದ ತಪ್ಪಿ, ತಾವು ಸುರಕ್ಷಿತರಾಗಿರುವೆವೆಂದು ಜೀನ್ ವಾಲ್ಜೀನನ ಮನಸ್ಸಿಗೆ ಶಾಂತಿಯುಂಟಾಗಿ ಅವನು ಆ ರಾತ್ರಿ ಸುಖವಾಗಿ ನಿದ್ರೆಮಾಡಿದನು. ಮಾರನೆಯ ದಿನ ಸಾಯಂಕಾಲದಲ್ಲಿ ಕೋಸೆಟ್ಟಳು ತನಗೆ ತಲೆ ನೋಯುತ್ತಿರುವುದೆಂದು ಹೇಳಿ ಹೊತ್ತಿಗೆ ಮುಂಚೆ ಮಲಗಿಕೊಂಡಳು. ಊಟಮಾಡುತ್ತಿರುವಾಗ ಪರಿಚಾರಿಣಿಯು, 'ಮಾನ್‌ಸಿಯುರ್', ಏನೋ ಗದ್ದಲವಾಗುತ್ತಿದೆ. ಪ್ಯಾರಿಸ್ ನಗರದಲ್ಲಿ ಯುದ್ಧವು ನಡೆಯುತ್ತಿರುವುದು,' ಎಂದಳು. ಆದರೆ ಅವಳು ಹೇಳಿದ ಮಾತನ್ನು ಅವನು ಅಷ್ಟಾಗಿ ಗಮನಿಸಲಿಲ್ಲ.

ಸ್ವಲ್ಪ ಹೊತ್ತಿನ ಮೇಲೆ, ಅವನು ಕೊಠಡಿಯಲ್ಲಿ ಶತಪಥ ತಿರುಗುತ್ತಿರುವಾಗ, ಪಕ್ಕದ ಮೇಜಿನ ಮೇಲೆ ಬಾಗಿರುವ ನಿಲುವು ಕನ್ನಡಿಯಲ್ಲಿ ಈ ಮುಂದೆ ಬರೆದಿರುವಂತೆ ಮಾತುಗಳು ಅವನ ಕಣ್ಣಿಗೆ ಬಿದ್ದುವು.

'ಪ್ರಿಯಾ! ಓ! ನಮ್ಮ ತಂದೆಯು ಈಗಲೇ ಇಲ್ಲಿಂದ ಹೊರಡಬೇಕೆಂದು ನಿಶ್ಚಯಿಸಿರುವನು. ನಾವು ಈ ರಾತ್ರಿ ರೂ ಡಿ ಎಲ್'ಹೋಂ ಆರಂ ಬೀದಿಯ ೭ನೆ ನಂಬರು ಮನೆಗೆ ವಾಸಕ್ಕೆ

ಹೋಗುವೆವು. ಒಂದು ವಾರದೊಳಗಾಗಿ ನಾವು ಇಂಗ್ಲೆಂಡನ್ನು ಸೇರುವೆವು. ಕೋಸೆಟ್, ಜೂನ್ ೪ನೆಯ ತಾರೀಖು.

ಮೊದಲು ಅವನಿಗೆ ಇದರ ಅರ್ಥವೇ ತಿಳಿಯಲಿಲ್ಲ. ಅನಂತರ, ಕೋಸೆಟ್ಟಳ ಬರೆವಣಿಗೆಯ ಒತ್ತುವ ಕಾಗದವು ಕನ್ನಡಿಯ ಮುಂದೆ ತೆರೆದು ಬಿದ್ದಿದ್ದುದು ಅವನ ಕಣ್ಣಿಗೆ ಬಿತ್ತು. ಅವಳು ತಾನು ಬರೆದ ಕಾಗದವನ್ನು ಅದರಿಂದ ಒತ್ತಿದುದೂ ಆ ಬರೆವಣಿಗೆಯು ಕನ್ನಡಿಯಲ್ಲಿ ಪ್ರತಿಫಲಿಸಿದ್ದುದೂ ಪ್ರತ್ಯಕ್ಷವಾಗಿ ಕಂಡಿತು. ಅವನಿಗೆ ಮೇರಿಯಸ್ಸನ ಹೆಸರು ತಿಳಿದಿರಲಿಲ್ಲ ; ಕಳೆದ ಆರು ವಾರಗಳಿಂದಲೂ ಅವನಿಗೂ ಕೋಸೆಟ್ಟಳಿಗೂ ಪರಸ್ಪರ ಭೇಟಿಯಾಗುತ್ತಿದ್ದುದನ್ನೂ ಅವನು ಅರಿಯನು ; ಆದರೆ ಆ ಕೂಡಲೇ ತನ್ನಲ್ಲಿ ತಾನು, 'ಓಹೋ ! ಅವನೇ !' ಎಂದುಕೊಂಡನು. ಆ ಅಪರಿಚಿತನಾದ ಯುವಕನ ವಿಷಯದಲ್ಲಿ ಇವನಿಗೆ ಒಂದು ಭಯಂಕರ ಮನೋವಿಕಾರವೇ ಉಂಟಾಯಿತು. ಅಂತರಂಗದಲ್ಲಿ ಅವನ ಮೇಲೆ ದ್ವೇಷವೇ ಉದಿಸಿತ್ತು.

ತಾನು ಏನು ಮಾಡುತ್ತಿರುವೆನೆಂಬುದು ತನಗೇ ಗೋಚರವಿಲ್ಲದೆ ಅವನು ಹೊರಗಡೆಗೆ ಬಂದು, ಬಾಗಿಲ ಬಳಿಯಲ್ಲಿದ್ದ ಒಂದು ಕಲ್ಲಿನ ಮೇಲೆ ಕುಳಿತನು ಕೆಲವು ಗಂಟೆಗಳ ಮೇಲೆ ಯಾವನೋ ಪತ್ರವಾಹಕನು ಬಂದು, ಕೋಸೆಟ್ಟಳ ಹೆಸರಿಗೆ ಬರೆದಿದ್ದ ಒಂದು ಪತ್ರವನ್ನು ಇವನ ಕೈಗೆ ಕೊಟ್ಟನು. ಇದು ತಾನು ಕನ್ನಡಿಯಲ್ಲಿ ನೋಡಿ ಓದಿದ್ದ ಪತ್ರಕ್ಕೆ ಪ್ರತ್ಯುತ್ತರವಿರಬೇಕೆಂದು ಅವನಿಗೆ ತೋರಿ ಅನಂತರ ಅವನು ಮೊದಲನೆಯ ಸಲ ಆ ಪತ್ರವನ್ನು ಓದಿದಾಗ, ಮೇರಿಯಸ್ಸನು ಆಗಲೇ ಸತ್ತುಹೋಗಿರುವನು ಅಥವಾ ಕ್ಷಿಪ್ರದಲ್ಲಿ ಸಾಯುವನು, ಎಂಬ ಭಾವವರಿತು ಅವನಿಗೆ ಸಂತೋಷವೇ ಆಯಿತು. ಕೂಡಲೇ ಸ್ವಾಭಾವಿಕವಾದ ಅವನ ಉತ್ತಮ ಗುಣವು ಅವನಲ್ಲಿ ಉಕ್ಕಿ ಹೊರಹೊಮ್ಮಿತು. ಆಗ ಅವನು ಆಯುಧವನ್ನು ತೆಗೆದುಕೊಂಡು, ಗುಂಡಗಳು ಹಾರುತ್ತಿದ್ದ ಸ್ಥಳವನ್ನು ಕುರಿತು ಹೊರಟನು.

ರಕ್ಷಣಾರ್ಥವಾಗಿ ಹಾಕಿದ್ದ ಬ್ಯಾರಿಕೇಡ್ ಬಳಿಗೆ ಬಂದು, ಅವನು ತಳಪಾಯದಲ್ಲಿ ಕಟ್ಟಿರುವ ನೆಲಮಾಳಿಗೆಯ ಕೊಠಡಿಯೊಳಕ್ಕೆ ಹೋಗಿ ನೋಡಲು, ಅಲ್ಲಿ ಜೇವರ್ಟನನ್ನು ಒಂದು ಕಂಬಕ್ಕೆ ಕಟ್ಟಿದ್ದುದು ಇವನಿಗೆ ಗೋಚರವಾಯಿತು. ಜೇವರ್ಟನು ದುರಹಂಕಾರದಿಂದ ಕಣ್ಣುಗಳನ್ನು ಮುಚ್ಚಿ, ಸುಮ್ಮನೆ 'ಇದು ಸ್ವಭಾವವೇ !' ಎಂದನು.

ಸ್ವಲ್ಪ ಹೊತ್ತಿನ ಮೇಲೆ ಜೀನ್ ವಾಲ್ಜೀನನು, ಆ ಬ್ಯಾರಿಕೇಡಿನ ಒಳಭಾಗದಲ್ಲಿ ಬೇಕಾಗಿದ್ದ ಒಂದು ಚರ್ಮದ ಮೆತ್ತೆಯನ್ನು ತರುವುದಕ್ಕೋಸ್ಕರವಾಗಿ, ಗುಂಡಿನ ಮಳೆಯೇ ಸುರಿಯುತ್ತಿದ್ದ ಬೀದಿಗೆ ನುಗ್ಗಿ ಬಹು ಸಾಹಸದಿಂದ ಅದನ್ನು ತಂದನು. ಅಲ್ಲಿಯ ಸೇನಾಧಿಕಾರಿಯು ಇದನ್ನು ನೋಡಿ ಇವನನ್ನು ಬಹಳವಾಗಿ ಗೌರವಿಸಿದನು ; ಆಗ ಜೀನ್ ವಾಲ್ಜೀನನು, 'ಸ್ವಾಮಿ, ನಾನು ಬಹುಮಾನಾರ್ಹನೆಂದು ತಾವು ಎಣಿಸುವಿರಾ ?' ಎಂದನು.

'ನಿಜವಾಗಿಯೂ ಎಣಿಸುವೆನು.'

'ಒಳ್ಳೆಯದು ! ಹಾಗಾದರೆ ನಾನೊಂದು ಬಹುಮಾನವನ್ನು ಕೇಳಿಕೊಳ್ಳುವೆನು.'

'ಏನದು ?'

'ಆ ಜೇವರ್ಟನ ತಲೆಯನ್ನು ನಾನೇ ಹಾರಿಸಿಬಿಡಲು ಅಪ್ಪಣೆಯಾಗಬೇಕು.'

ಜೇವರ್ಟನು ತಲೆಯನ್ನೆತ್ತಿ ಜೀನ್ ವಾಲ್ಜೀನನನ್ನು ನೋಡಿ, ಅವನಿಗೆ ಕಾಣದಂತೆ ಸ್ವಲ್ಪ ಅಲುಗಾಡಿ, 'ಅದೇ ತಕ್ಕುದು,' ಎಂದನು.

ಆ ಅಧಿಕಾರಿಯಾದರೋ, ತನ್ನ ಕೈತುಪಾಕಿಗೆ ಮತ್ತೆ ಮದ್ದು ಗುಂಡನ್ನು ಹಾಕಲಾರಂಭಿಸಿದನು ; ಸುತ್ತಲೂ ನೋಡಿ ಆತನು, 'ಆಗಬಹುದು ; ಅದಕ್ಕೆ ಆತಂಕವೇನೂ ಇಲ್ಲ,' ಎಂದು ಹೇಳಿ, ಜೀನ್ ವಾಲ್ಜೀನನ ಕಡೆಗೆ ತಿರುಗಿ, 'ಈ ಗೂಢಚಾರನನ್ನೆಳೆದುಕೊಂಡು ಹೋಗು,' ಎಂದನು.

ಜೀನ್ ವಾಲ್ಜೀನನು ಮೇಜಿನ ತುದಿಯಲ್ಲಿ ಕುಳಿತು ನಿಜವಾಗಿಯೂ ಜೇವರ್ಟನನ್ನು ತನ್ನ ವಶಕ್ಕೆ ತೆಗೆದುಕೊಂಡನು. ಅವನು ಕೈತುಪಾಕಿಯನ್ನು ಹಿಡಿದುಕೊಂಡ ಮೇಲೆ ಅದರಿಂದ ಉಂಟಾದ ಸ್ವಲ್ಪ ಶಬ್ದದಿಂದ ಅವನು ಅದರ ಕುದುರೆಯನ್ನು ಏರಿಸಿದನೆಂಬುದೂ ತೋರಿತು.

ಸುಮಾರು ಇದೇ ಸಮಯಕ್ಕೆ ಸರಿಯಾಗಿ ತುತೂರಿಗಳ ಶಬ್ದವು ಇವರಿಗೆ ಕೇಳಿಸಿತು.

ಬ್ಯಾರಿಕೇಡಿನ ಮೇಲ್ಗಡೆಯಿಂದ, 'ಬನ್ನಿ ಬನ್ನಿ,' ಎಂದು ಮೇರಿಯಸ್ಸನು ಕೂಗುತ್ತಿದ್ದನು.

ಜೇವರ್ಟನು ನಿಸರ್ಗವಾದ ಮಂದಹಾಸದಿಂದ ನಕ್ಕು, ಆ ರಾಜದ್ರೋಹಿಗಳ ಕಡೆಗೆ ನೋಡಿ, 'ನೀವು ನನಗಿಂತಲೂ ಹೆಚ್ಚು ಕಾಲ ಬದುಕಿರಲಾರಿರಿ,' ಎಂದನು.

'ಎಲ್ಲರೂ ಹೊರಗೆ ಹೊರಡಿ' ಎಂದು ಮಾನ್ಸಿಯುರ್ ಎಸ್ ಜೊಲ್‌ರಾಸ್ ಎಂಬುವನು ಕೂಗಿದನು.

ಆ ರಾಜವಿರೋಧಿಗಳು ಗದ್ದಲಮಾಡುತ್ತಾ ಮುಂದಕ್ಕೆ ನುಗ್ಗಿ, ಹೊರಕ್ಕೆ ಹೋಗುತ್ತಿರುವಾಗ, ಜೇವರ್ಟನು, 'ನಮಸ್ಕಾರ, ಒಂದು ಕ್ಷಣ, ಹೋಗಿ ಬನ್ನಿ,' ಎಂದ ಮಾತು ಹಿಂದಿನಿಂದ ಕೇಳಿಸಿತು.

ಜೇವರ್ಟನ ಬಳಿಯಲ್ಲಿ ಜೀನ್ ವಾಲ್ಜೀನನೊಬ್ಬನೇ ನಿಂತನು. ಬಂದಿಯ ಸೊಂಟಕ್ಕೆ ಬಿಗಿದು ಮೇಜಿನ ಕೆಳಭಾಗಕ್ಕೆ ಕಟ್ಟಿದ್ದ ಹಗ್ಗದ ಗಂಟನ್ನು ಬಿಚ್ಚಿ, ಇವನು ಅವನನ್ನು ಮೇಲಕ್ಕೆ ಏಳೆಂದು ಹೇಳಿದ ಮೇರೆಗೆ ಜೇವರ್ಟನು ಎದ್ದು ನಿಂತನು.

ಭಾರವನ್ನು ಹೊತ್ತಿರುವ ಪಶುಪ್ರಾಣಿಗೆ ಹಗ್ಗವನ್ನು ಹಾಕಿ ಕರೆದುಕೊಂಡು ಹೋಗುವಂತೆ ಜೀನ್ ವಾಲ್ಜೀನನು ಅವನನ್ನು ತನ್ನ ಹಿಂದೆ ಎಳೆದುಕೊಂಡು ಆ ಮದ್ಯದ ಅಂಗಡಿಯಿಂದ ಹೊರಕ್ಕೆ ಹೊರಟನು. ಬೇಡಿಗಳಿಂದ ಬಂಧಿತನಾಗಿದ್ದ ಜೇವರ್ಟನು ಹತ್ತಿರ ಹತ್ತಿರವಾಗಿ ಮಾತ್ರವೇ ಹೆಜ್ಜೆಗಳನ್ನು ಹಾಕಲು ಸಾಧ್ಯ

ವಾಗಿದ್ದುದರಿಂದ ಅವರು ನಿಧಾನವಾಗಿ ಹೋಗಬೇಕಾಯಿತು. ಜೀನ್ ವಾಲ್ಜೀನನ ಕೈಯಲ್ಲಿ ತುಪಾಕಿಯಿತ್ತು. ಇವರಿಬ್ಬರೂ ಆ ಅಡ್ಡಗೋಡೆಯ ಒಳಭಾಗವನ್ನು ದಾಟಿ ಹೊರಗೆ ಬಂದರು.

ರಾಜವಿರೋಧ ಪಕ್ಷದವರು, ಕೂಡಲೇ ಪ್ರತಿಪಕ್ಷದವರ ಮೇಲೆ ಬೀಳುವ ಉದ್ದೇಶದಿಂದ, ಬೇರೆ ಕಡೆಗೆ ನೋಡುತ್ತಿದ್ದರು. ಮೇರಿಯಸ್ಸನು ಮಾತ್ರ ಇವರನ್ನು ನೋಡಿದನು.

ಜೀನ್ ವಾಲ್ಜೀನನು ಜೇವರ್ಟನನ್ನು ಮಾತ್ರ ಬಿಡದೆ, ಶ್ರಮ ಪಟ್ಟು, ಆ ರೂ ಮಾನ್‌ಡಿಟೂರ್ ಬೀದಿಯ ಕಡೆಯ ಕಂದಕದ ಮೇಲ್ಗಡೆಗೆ ಬಂಧಿತನಾದ ಜೇವರ್ಟನನ್ನೂ ಹತ್ತಿಸಿ ತಾನೂ ಹತ್ತಿದನು.

ಅವರಿಬ್ಬರೂ ಕಂದಕದ ಗೋಡೆಯನ್ನು ಹತ್ತಿ ಒಂದು ಚಿಕ್ಕ ಬೀದಿಗೆ ಬಂದರು. ಅಲ್ಲಿ ಇವರಲ್ಲದೆ ಮತ್ತೆ ಯಾರೂ ಇರಲಿಲ್ಲವಾದ ಕಾರಣ ಇವರು ಯಾರ ದೃಷ್ಟಿಗೂ ಬೀಳಲಿಲ್ಲ. ಅಲ್ಲಿ ಒಂದು ಮನೆಯ ಕಡೆಯ ಮೂಲೆಯಲ್ಲಿ, ಇವರು ಆ ರಾಜವಿರೋಧಪಕ್ಷದವರಿಗೆ ಕಾಣದಂತೆ ಮರೆಯಾಗಿದ್ದರು. ಸ್ವಲ್ಪ ದೂರದಲ್ಲಿಯೇ, ಬ್ಯಾರಿಕೇಡಾ ಗೋಡೆಗಳ ಕಡೆಯಿಂದ ತಂದು ಹಾಕಿದ್ದ ಹೆಣಗಳು ಭಯಂಕರವಾದ ದೊಡ್ಡ ರಾಶಿಯಾಗಿ ಬಿದ್ದಿದ್ದುವು.

ಕೈತುಪಾಕಿಯನ್ನು ಕಂಕುಳಲ್ಲಿಟ್ಟು ಜೀನ್ ವಾಲ್ಜೀನನು ಜೇವರ್ಟನನ್ನೇ ದೃಷ್ಟಿಸಿ ನೋಡಿದುದರಲ್ಲಿ, ‘ಅಯ್ಯಾ! ಜೇವರ್ಟ್, ಇದೋ ನೋಡು, ನಾನು ಜೀನ್ ವಾಲ್ಜೀನ್,’ ಎಂದು ಅವನು ಬಾಯಿಂದ ಹೊಸದಾಗಿ ಹೇಳಬೇಕಾಗಿರಲಿಲ್ಲ.

ಅದಕ್ಕೆ ಜೇವರ್ಟನು, ‘ನಿನ್ನ ಸೇಡನ್ನು ತೀರಿಸಿಕೋ,’ ಎಂದು ಉತ್ತರ ಕೊಟ್ಟನು. ಜೀನ್ ವಾಲ್ಜೀನನು ತನ್ನ ಜೇಬಿನಿಂದ ಒಂದು ಚೂರಿಯನ್ನು ತೆಗೆದು ಮಡಿಸಿದ್ದ ಅಲಗನ್ನು ಎತ್ತಿ ಹಿಡಿದುಕೊಂಡನು.

ಜೇವರ್ಟನು, 'ಏನು! ಚೂರಿಯೇ! ಸರಿ, ನ್ಯಾಯ, ಅದೇ ನಿನಗೆ ತಕ್ಕದ್ದು,' ಎಂದನು.

ಜೀನ್ ವಾಲ್ಜೀನನು, ಜೇವರ್ಟನ ಕುತ್ತಿಗೆಗೆ ಕಟ್ಟಿದ್ದ ಹಗ್ಗವನ್ನು ಮೊದಲು ಕೊಯ್ದು, ಅನಂತರ ಅವನ ಕೈಗಳನ್ನು ಬಾಧಿಸಿದ್ದ ಕಟ್ಟುಗಳನ್ನು ಕತ್ತರಿಸಿ, ಕೆಳಗೆ ಬಾಗಿ, ಕಾಲುಗಳಿಗೆ ಕಟ್ಟಿದ್ದ ಹಗ್ಗವನ್ನೂ ಕೊಯ್ದು ಹಾಕಿ, ಮೇಲಕ್ಕೆ ಎದ್ದು, 'ಹೋಗು, ನಿನ್ನನ್ನು ಸ್ವತಂತ್ರವಾಗಿ ಬಿಟ್ಟಿರುವೆನು,' ಎಂದನು. ಜೇವರ್ಟನಿಗೆ ದಿಕ್ಕೇ ತೋರಲಿಲ್ಲ. ಅವನು ಸಂಪೂರ್ಣ ಸ್ವತಂತ್ರನಾಗಿದ್ದರೂ ಅವನಿಗೆ ಮನಸ್ಸಿನಲ್ಲಿ ಉಂಟಾದ ಏನೋ ಅನಿವಾರ್ಯವಾದ ಭ್ರಾಂತಿಯಿಂದ ಸ್ತಬ್ಧನಾಗಿ ಹಾಗೆಯೇ ನಿಂತುಬಿಟ್ಟನು.

ಜೀನ್ ವಾಲ್ಜೀನನು ಹಾಗೆಯೇ ಮಾತನ್ನು ಮುಂದುವರಿಸಿ, 'ಅಯ್ಯಾ! ನಾನು ಈ ಸ್ಥಳದಿಂದ ಪ್ರಾಣಸಹಿತನಾಗಿ ಹೋಗುವೆನೆಂಬ ನಂಬಿಕೆಯು ನನಗಿಲ್ಲ. ಒಂದು ವೇಳೆ ಆಕಸ್ಮಿಕ ಸಂಭವದಿಂದ ಹಾಗೆ ಏನಾದರೂ ನಾನು ಜೀವದಿಂದಿದ್ದರೆ, ಫಾಚೆಲ್‌ವೆಂಟ್ ಎಂದು ಕರೆದುಕೊಂಡು, ರೂ ಡಿ ಎಲ್'ಹೋಂ ಆರಂ, ನಂ. ೭ನೆಯ ಮನೆಯಲ್ಲಿರುವೆನು,' ಎಂದನು. ಜೇವರ್ಟನು, 'ಎಚ್ಚರಿಕೆಯಿಂದಿರು,' ಎನ್ನಲು, ಜೀನ್ ವಾಲ್ಜೀನನು, 'ಇನ್ನು ಹೊರಡು,' ಎಂದನು.

ಮತ್ತೆ ಜೇವರ್ಟನು, 'ಏನೆಂದು ಹೇಳಿದೆ! ಫಾಚೆಲ್‌ವೆಂಟ್, ರೂ ಡಿ ಎಲ್'ಹೋಂ ಆರಂ, ಅಲ್ಲವೇ?' ಎಂದನು.

'ಅಹುದು, ೭ನೆಯ ನಂಬರಿನ ಮನೆ.'

ಜೇವರ್ಟನು ಸಣ್ಣ ಧ್ವನಿಯಿಂದ ಅದನ್ನೇ ಮತ್ತೆ 'ಏಳನೆಯ ನಂಬರು,' ಎಂದು ಉಚ್ಚರಿಸಿದನು. ಅನಂತರ ಅವನು ತನ್ನ ಅಂಗಿಯ ಗುಂಡಿಗಳನ್ನು ಹಾಕಿಕೊಂಡು, ಮೊದಲಿನಂತೆ ತನ್ನ ಸೈನಿಕತ್ವಕ್ಕೆ ಸ್ವಭಾವವಾದ ಬಿಗಿಯಿಂದ ಭುಜಗಳನ್ನು ಎತ್ತರಿಸಿ ತಿರುಗಿ ತೋಳುಗಳನ್ನು ತಟ್ಟಿ, ಒಂದು ಕೈಯಿಂದ ಗಡ್ಡವನ್ನು

ಹಿಡಿದುಕೊಂಡು ಅಂಗಡಿಯ ಬೀದಿಯ ಕಡೆಗೆ ಹೊರಟು ಹೋದನು.

ಅವನು ಹೊರಟುಹೋದ ಮೇಲೆ, ಜೀನ್ ವಾಲ್ಜೀನನು ತುಪಾಕಿಯನ್ನು ಆಕಾಶದ ಕಡೆಗೆ ಹಾರಿಸಿದನು.

ಅನಂತರ ಬ್ಯಾರಿಕೇಡಿನೊಳಕ್ಕೆ ಹೋಗಿ, 'ಆಯಿತು, ಕೆಲಸವು ಪೂರೈಯಿಸಿತು,' ಎಂದು ಹೇಳಿದನು.

---

ಬ್ಯಾರಿಕೇಡಿನ ಬಳಿಯಲ್ಲಿ ಯುದ್ಧವು ಭಯಂಕರವಾಗಿ ನಡೆಯು ತ್ತಿತ್ತು. ಮೇರಿಯುಸ್ಸನು ಪ್ರಾಣರಕ್ಷಣೆಗೆ ತಕ್ಕ ಆಧಾರವೇ ಇಲ್ಲದೆ ಯುದ್ಧಮಾಡುತ್ತ, ಗುರಿಯಿಡಲವಕಾಶವೇ ಇಲ್ಲದೆ ಸುಮ್ಮನೆ ಗುಂಡುಗಳನ್ನು ಹೊಡೆಯುತ್ತಿದ್ದನು. ಅವನು ಅರ್ಧಕ್ಕಿಂತಲೂ ಹೆಚ್ಚಾಗಿ ತನ್ನ ಶರೀರ ಭಾಗವನ್ನು ಕೊತ್ತಳದ ಮೇಲೆ ತೋರಿ, ಮರಣಕ್ಕೆ ಹೆದರದೆ ಮೃತ್ಯುವಿಗಾಮಂತ್ರಣವನ್ನು ಕೊಡುವಂತೆ ಯುದ್ಧ ಮಾಡುತ್ತಿದ್ದನು. ಅವನ ಶರೀರವೆಲ್ಲವೂ ಗಾಯಗಳಿಂದ ತುಂಬಿಹೋಗಿತ್ತು. ಅದರಲ್ಲಿಯೂ ಅವನ ತಲೆಗೆ ಆಗಿದ್ದ ಗಾಯ ಗಳಿಂದ ಅವನ ಮುಖವೆಲ್ಲವೂ ರಕ್ತಮಯವಾಗಿ ಕೆಂಪು ವಸ್ತ್ರದಿಂದ ಮುಚ್ಚಿದಂತೆ ಕಾಣುತ್ತಿತ್ತು.

ಅನಂತರ ಬ್ಯಾರಿಕೇಡ್ ಪ್ರಾಂತ್ಯವನ್ನು ವಶಪಡಿಸಿಕೊಂಡು ರಾಜಪಕ್ಷದವರು ಜಯಘೋಷಗಳಿಂದ ಅದರ ಮೇಲಕ್ಕೆ ಸಾಲು ಸಾಲಾಗಿ ಹತ್ತಿ ನಿಂತರು. ಹೊಡೆದಾಡಿ ಇನ್ನೂ ಪ್ರಾಣದಿಂದ ಉಳಿದಿದ್ದ, ಪ್ರತಿಪಕ್ಷದ ಕೆಲವರು ಮಾತ್ರ ಆ ಮದ್ಯದ ಅಂಗಡಿ ಯೊಳಕ್ಕೆ ಹೋಗಿ ಹಿಂದುಗಡೆಯ ಬಾಗಿಲಿನಿಂದ ತಪ್ಪಿಸಿಕೊಂಡು ಓಡಿಹೋಗಬಹುದೆಂಬ ಆಸೆಯಿಂದ ಮುಂದಿನ ಬಾಗಿಲಿಗೆ ಗುಂಪು ಕಟ್ಟಿಕೊಂಡು ನುಗ್ಗಿದರು.

ಮೇರಿಯುಸ್ಸನು ಹೊರಗೇ ನಿಂತನು. ಒಂದು ಗುಂಡಿನ ಪೆಟ್ಟಿನಿಂದ ಅವನ ಭುಜದ ಎಲುಬು ಮುರಿಯಿತು. ಅವನು ಜ್ಞಾನತಪ್ಪಿ ಬೀಳುವಷ್ಟರಲ್ಲಿ, ಯಾವನೋ ತನ್ನನ್ನು ಬಲವಾಗಿ ಹಿಡಿದಂತೆ ಅವನಿಗೆ ತೋರಿತು. ಆಗ 'ಓಹೋ! ನನ್ನನ್ನು ಸೆರೆಹಿಡಿದುಬಿಟ್ಟರು. ಇನ್ನು ನನ್ನನ್ನು ಗುಂಡಿನಿಂದ ಹೊಡೆದು ಬಿಡುವರು,' ಎಂದು ಅವನು ಆಲೋಚಿಸಿಕೊಂಡನು. ಮೇರಿಯು ಸ್ಸನು ನಿಜವಾಗಿಯೂ ಬಂದಿಯೇ ಆದನು. ಯಾರ ಬಂದಿ? ಜೀನ್ ವಾಲ್ಜೀನನ ಬಂದಿಯು.

ಜೀನ್ ವಾಲ್ಜೀನನು, ಪ್ರಜ್ಞೆತಪ್ಪಿದ್ದ ಮೇರಿಯಸ್ಸನನ್ನು ತನ್ನ ತೋಳುಗಳಿಂದೆತ್ತಿಕೊಂಡು, ಆ ಬ್ಯಾರಿಕೇಡಿನ ವ್ಯೈದಾನ ವನ್ನು ದಾಟಿ, ಆ ಮನೆಯ ಮೂಲೆಯ ಕಡೆಗೆ ಹೋಗಿ ಮಾಯ ವಾದುದನ್ನು ಯಾರೂ ನೋಡಲಿಲ್ಲ. ಅವನು ಅಲ್ಲಿ ನಿಂತು ಮೇರಿ ಯಸ್ಸನನ್ನು ನೆಲಕ್ಕಿಳಿಸಿ ಅವನ ಬೆನ್ನನ್ನು ಗೋಡೆಗೆ ಒರಗಿಸಿ ಅವ ನನ್ನು ಚೆನ್ನಾಗಿ ನೋಡಿದನು.

ಅನಂತರ ಮುಂದಕ್ಕೆ ಸ್ವಲ್ಪ ದೂರದಲ್ಲಿ ಹಾಸುಗಲ್ಲುಗಳ ಕೆಳಗೆ ಕಬ್ಬಿಣದ ಸಲಾಕಿಗಳ ಒಂದು ಚೌಕಟ್ಟು ನೆಲಸಮವಾಗಿ ಹುದ್ದಿರುವುದು ಅವನಿಗೆ ಕಂಡಿತು. ಜೀನ್ ವಾಲ್ಜೀನನು ಹಾಗೆಯೇ ಮುಂದಕ್ಕೆ ಫಕ್ಕನೆ ಹೋಗಿ ನೋಡಲು, ಅವನ ಹಿಂದಣ ಪಲಾಯನಶಾಸ್ತ್ರದ ಭಾವಗಳು ಮನಸ್ಸಿಗೆ ಮಿಂಚಿನಂತೆ ಹೊಳೆದುವು. ಅನಂತರ ಆ ಕಲ್ಲುಗಳನ್ನೆತ್ತಿದುದೂ, ಚೌಕಟ್ಟನ್ನು ಮೇಲಕ್ಕೆ ತೆಗೆದುದೂ, ಹೆಣದಂತೆ ಭಾರವಾಗಿದ್ದ ಮೇರಿಯಸ್ಸ ನನ್ನು ಭುಜದ ಮೇಲಕ್ಕೆ ಎತ್ತಿಕೊಂಡು, ತನ್ನ ಮೊಣಕೈ ಮೊಣ ಕಾಲುಗಳ ಶಕ್ತಿಯಿಂದ ಆ ಹೆಚ್ಚು ಆಳವಿಲ್ಲದ ಭಾವಿಯೊಳಕ್ಕೆ ಇಳಿ ದುದೂ, ತನ್ನ ತಲೆಯ ಮೇಲಕ್ಕೆ ಮತ್ತೆ ಆ ಸಲಾಕಿಗಳ ಬಾಗಿಲೂ ಅದರ ಮೇಲಕ್ಕೆ ಕಲ್ಲುಗಳೂ ಮುಚ್ಚಿಕೊಳ್ಳುವಂತೆ ಎಳೆದುಕೊಂ ಡುದೂ, ಭೂಮಿಯ ಮಟ್ಟದಿಂದ ಹತ್ತು ಅಡಿಗಳ ಕೆಳಗಡೆಗೆ ಇಳಿ ಜಾರಾಗಿ ಹೋಗಿದ್ದ ನೆಲದ ಮೇಲಕ್ಕೆ ಯಾವುದೋ ಆಧಾರದ ಮೇಲೆ ಕಾಲಿಟ್ಟು ಇಳಿದುದೂ, ಈ ಕಾರ್ಯಗಳೆಲ್ಲವೂ ಯಾವುದೋ ಸ್ವಪ್ನದಲ್ಲಿ ಮಾಡಿದಂತೆ, ರಾಕ್ಷಸ ಶಕ್ತಿಯಿಂದಲೂ ಹದ್ದಿನಂತಹ ವೇಗದಿಂದಲೂ ಸಹ ಕೆಲವು ಕ್ಷಣಗಳೊಳಗಾಗಿ ಅವನಿಂದ ಮಾಡಲ್ಪಟ್ಟವು.

ಇನ್ನೂ ಪ್ರಜ್ಞೆಯಿಲ್ಲದೆ ಇದ್ದ ಮೇರಿಯಸ್ಸನನ್ನು ಎತ್ತಿ ಕೊಂಡು ಬರುತ್ತ, ತಾನು ಒಂದು ವಿಧವಾದ ಸುರಂಗಮಾರ್ಗ ದಲ್ಲಿರುವೆನೆಂದು ಜೀನ್ ವಾಲ್ಜೀನನು ತಿಳಿದುಕೊಂಡನು. ಇದು ಪ್ಯಾರಿಸ್ ನಗರದ ಗ್ರಾಮಸಾರವು ಹರಿದುಹೋಗುವ ದೊಡ್ಡ

ಸುರಂಗದ ಚರಂಡಿಯು. ಈ ಚರಂಡಿಯೂ ಇತರ ದೊಡ್ಡ ನಗರಗಳ ಸುರಂಗದ ಚರಂಡಿಗಳಂತೆ ಅನೇಕ ಸುರಂಗದ ಬೀದಿಗಳಂತಿರುವ ಕಾಲುವೆ (ಮೊಹರಿ)ಗಳಿಂದ ಕೂಡಿತ್ತು. ಈ ಮಾರ್ಗಗಳು ಒಂದಕ್ಕೊಂದು ಸೇರಿ ಹೆಣೆದುಕೊಂಡಿದ್ದುದಲ್ಲದೆ ಕೆಲವು ಕಡೆಗಳಲ್ಲಿ ಒಂದು ಮಾರ್ಗದಿಂದ ಮತ್ತೊಂದು ಮಾರ್ಗಕ್ಕೆ ದ್ವಾರಗಳೂ ಇದ್ದುವು. ಈ ಮಾರ್ಗಗಳಲ್ಲಿ, ಮನೆಗಳಿಂದ ಹೊರಟ ಎಲ್ಲಾ ಕೊಳೆಯ ನೀರೂ, ಬೀದಿಗಳ ಮಳೆಯ ನೀರೂ, ಕೆಸರಿನೊಡನೆ ಸೇರಿ ಹರಿಯುತ್ತಿದ್ದಿತು. ಇಲ್ಲಿ ಅಲ್ಲಲ್ಲಿ ಮೇಲ್ಗಡೆ ಕಬ್ಬಿಣದ ಸಲಾಕಿಗಳ ಚೌಕಟ್ಟುಗಳಿದ್ದ ಕಡೆಗಳಲ್ಲಿ ಹೊರತು ಉಳಿದ ಕಡೆಗಳಲ್ಲಿ ಸಂಪೂರ್ಣವಾಗಿ ಕಗ್ಗತ್ತಲೆಯಾಗಿತ್ತು. ವಾಯುವಂತೂ ಬಹಳ ದುರ್ವಾಸನೆಯಿಂದ ತುಂಬಿತ್ತು. ಅಲ್ಲಿ ವಾಸಮಾಡಬಹುದಾದ ಪ್ರಾಣಿಗಳೆಂದರೆ ಇಲಿಗಳು ಮಾತ್ರವೇ.

ಜೀನ್ ವಾಲ್ಜೀನನಿಗೆ ಮೊದಲು ಕಣ್ಣುಗಳು ಕಾಣದೆ ಹೋದುವು. ಮತ್ತೆ ಒಂದು ನಿಮಿಷದೊಳಗಾಗಿ ತನಗೆ ಕಿವುಡು ಹಿಡಿದಂತೆಯೂ ಇವನಿಗೆ ತೋರಿತು. ಇವನ ಕಾಲಿನ ಕೆಳಗೆ ಗಟ್ಟಿಯಾದ ಪದಾರ್ಥವಿರುವುದೆಂದು ಇವನ ಮನಸ್ಸಿಗೆ ಗೊತ್ತಾಯಿತು. ಇಷ್ಟಲ್ಲದೆ ಇನ್ನೇನೂ ತಿಳಿಯಲಿಲ್ಲ. ಆದರೆ ಅಷ್ಟು ಮಾತ್ರ ಅವನಿಗೆ ಸಾಕಾಗಿತ್ತು. ಅವನು ಮೊದಲು ಒಂದು ಕೈಯನ್ನೂ ಅನಂತರ ಇನ್ನೊಂದು ಕೈಯನ್ನೂ ಚಾಚಿ ಎರಡು ಕಡೆಗಳಲ್ಲಿಯೂ ಇದ್ದ ಗೋಡೆಗಳನ್ನು ಮುಟ್ಟಿ ಆ ಮಾರ್ಗವು ಇಕ್ಕಟ್ಟಾಗಿರುವುದೆಂಬುದನ್ನು ತಿಳಿದುಕೊಂಡನು. ಜಾರಿಬಿದ್ದು, ನೆಲವು ತೇವವಾಗಿತ್ತೆಂದು ಗೊತ್ತುಮಾಡಿಕೊಂಡನು. ಅವನು ತನ್ನ ಮುಂದುಗಡೆಯಲ್ಲಿ ಬಿಲವೋ, ಗುಣಿಯೋ ಅಥವಾ ಕಂದಕವೋ ಏನಿರುವುದೋ ಎಂದು ಸಂದೇಹಪಟ್ಟು, ಎಚ್ಚರದಿಂದ ಒಂದೊಂದು ಹೆಜ್ಜೆಯನ್ನೇ ಇಡುತ್ತ ಮುಂದೆ ಹೋದನು. ನೆಲವು ಹಾಗೆಯೇ ಮುಂದು ವರಿದು ಹೋಗುತ್ತಿರುವುದೆಂಬುದು ಅವನ ಮನಸ್ಸಿಗೆ ದೃಢವಾಯಿತು. 'ಪುಪ್' ಎಂದು ಬಂದ ಕೊಳೆಯ ದುರ್ವಾ

ಸನೆಯಿಂದ ಅವನಿಗೆ ತಾನೆಲ್ಲಿರುವನೆಂಬುದು ಮನಸ್ಸಿಗೆ ಬಂತು.

ಮೇರಿಯುಸ್ಸನನ್ನು ನೆಲದ ಮೇಲೆ ಇಳಿಸಿ, ಸ್ವಲ್ಪ ದಣಿವಾರಿಸಿಕೊಂಡು, ಮತ್ತೆ ಅವನನ್ನು ಭುಜದ ಮೇಲಕ್ಕೆ ಎತ್ತಿಕೊಂಡು ಪ್ರಯಾಣವನ್ನಾರಂಭಿಸಿದನು ; ಅಲ್ಲದೆ ಮುಂದೆ ಏನಿರುವುದೆಂಬುದನ್ನು ಅರಿಯಲಾಗದ ಆ ಅಂಧಕಾರಮಯವಾದ ಗವಿಯಲ್ಲಿ ಮನೋನಿರ್ಧಾರದಿಂದ ಹೊರಟೇ ಹೊರಟನು.

ಸ್ವಲ್ಪ ಹೊತ್ತಿನಲ್ಲಿ ಅವನಿಗೆ ಒಂದು ಅಡ್ಡ ದಾರಿಯು ಸಂಧಿಸಿತು. ಅಲ್ಲಿ ಅವನು ಎಡಕ್ಕಾಗಲಿ, ಬಲಕ್ಕಾಗಲಿ, ತಿರುಗಬೇಕಾಗಿತ್ತು. ಈಗ ಅವನು ಯಾವ ಮಾರ್ಗವಾಗಿ ಹೋಗಬೇಕು ? ಇಳಿಜಾರಾಗಿ ಕೆಳಕೆಳಕ್ಕೆ ಹೋಗುತ್ತಿದ್ದ ಮಾರ್ಗದಲ್ಲಿ ಹೋದರೆ ಅವನು ಪ್ಯಾರಿಸ್ ನಗರದ ಅತ್ಯಂತ ಜನಸಾಂದ್ರತೆಯುಳ್ಳ ಭಾಗದಲ್ಲಿ ಹೊರಗೆ ಬರಬೇಕಾಗುವುದು. ಮೇಲಕ್ಕೆ ಏರಿ ಹೋಗುತ್ತಿದ್ದ ಮಾರ್ಗವನ್ನನುಸರಿಸಿ ಹೊರಟರೆ ಮುಂದೆ ಆ ಕೊಳೆಯ ನೀರಿನ ಚರಂಡಿಯಲ್ಲಿ ಬಹು ದೂರ ಪ್ರಯಾಣಮಾಡಬೇಕಾಗುವುದು ; ಆದರೆ ಆ ಮಾರ್ಗವು ಅವನನ್ನು ಯಾರೂ ಇಲ್ಲದಿರುವ ನದೀತೀರ ಪ್ರದೇಶಕ್ಕೆ ತಂದುಬಿಡುವುದು.

ಅವನು ಬಲಗಡೆಗೆ ಹೊರಟು ಎತ್ತರವಾಗಿ ಹೋಗಿದ್ದ ಮಾರ್ಗದಲ್ಲಿ ಹತ್ತಿಕೊಂಡು ಸಾಧ್ಯವಾದ ಮಟ್ಟಿಗೂ ವೇಗವಾಗಿಯೇ ಹೋದನು. ಮೇರಿಯುಸ್ಸನ ತೋಳುಗಳು ಇವನ ಕುತ್ತಿಗೆಯನ್ನು ಬಳಸಿ, ಕಾಲುಗಳು ಹಿಂದೆ ಜೋಲುಬಿದ್ದಿದ್ದುವು. ಜೀನ್ ವಾಲ್ಜೀನನು ಎರಡು ತೋಳುಗಳನ್ನೂ ಒಂದು ಕೈಯಲ್ಲಿ ಹಿಡಿದು ಮತ್ತೊಂದು ಕೈಯಿಂದ ಗೋಡೆಯನ್ನು ತಡಕುತ್ತ ಹೋದನು. ಮೇರಿಯುಸ್ಸನ ಕೆನ್ನೆಯು ಇವನ ಕೆನ್ನೆಗೆ ಸೋಕಿತ್ತು. ಅದು ರಕ್ತಮಯವಾಗಿದ್ದುದರಿಂದ ಎರಡು ಕೆನ್ನೆಗಳೂ ಒಂದಕ್ಕೊಂದು ಅಂಟಿಕೊಂಡವು. ಮೇರಿಯುಸ್ಸನ ಕಡೆಯಿಂದ ಒಂದು ಉಷ್ಣವಾದ ರಕ್ತಪ್ರವಾಹವೇ ಇವನ ಮೇಲೆ ಹರಿದು ಇವನ ಬಟ್ಟೆಗಳನ್ನು ನೆನೆಯಿಸಿತು. ಇಷ್ಟಾದರೂ, ಇವನ ಕಿವಿಯನ್ನು

ಮುಟ್ಟಿದ್ದ ಆ ಗಾಯಪಟ್ಟವನ ಬಾಯಿಂದ ತೇವದ ಉಷ್ಣತೆಯು ತೋರಿಬಂದ ಕಾರಣ, ಅವನು ಉಸಿರಾಡುತ್ತಿರುವಂತೆಯೂ, ಆದರಿಂದ ಅವನಿಗೆ ಇನ್ನೂ ಜೀವವಿರುವಂತೆಯೂ ತೋರಿಬಂತು ಈಗ ಜೀನ್ ವಾಲ್ಜೀನನು ನಡೆದು ಹೋಗುತ್ತಿದ್ದ ಮಾರ್ಗವು ಮೊದಲಿನ ಮಾರ್ಗದಷ್ಟು ಚಿಕ್ಕದಲ್ಲ. ಆದರೂ ಅವನಿಗೆ ಇದರಲ್ಲಿ ನಡೆದುಹೋಗುವುದು ಕಷ್ಟವಾಗಿತ್ತು.

ಮುಂದಕ್ಕೆ ಹೋಗಹೋಗುತ್ತ ಪ್ರಯಾಣವು ಹೆಚ್ಚು ಕಷ್ಟವಾಗುತ್ತ ಬಂತು. ಅದರೊಳಗೆ ಕಟ್ಟಿದ್ದ ಕಮಾನುಗಳ ಎತ್ತರವು ಅಲ್ಲಲ್ಲಿ ವ್ಯತ್ಯಾಸವಾಗಿತ್ತು. ಸಾಮಾನ್ಯವಾದ ಎತ್ತರವು ಮನುಷ್ಯನ ಆಳತೆಯಷ್ಟಿರಬೇಕೆಂಬ ಅಂದಾಜಿನಿಂದ ೫ ಅಡಿ ೭ ಅಂಗುಲದಷ್ಟು ಕಟ್ಟಲ್ಪಟ್ಟಿತ್ತು. ಮೇರಿಯಸ್ಸನ ತಲೆಯು ಕಮಾನಿಗೆ ಬಡಿಯದಂತೆ ಎಚ್ಚರಿಕೆಯಿಂದ ಜೀನ್ ವಾಲ್ಜೀನನು ಬಲಾತ್ಕಾರವಾಗಿ ಬಾಗಲೇ ಬೇಕಾಗಿತ್ತು. ಅವನು ಗೋಡೆಯನ್ನು ತಡಕಿಕೊಂಡು ಪ್ರತಿ ಕ್ಷಣದಲ್ಲಿಯೂ ಬಗ್ಗಿ ಏಳುತ್ತಿರಬೇಕಾಯಿತು. ಒಡೆಗಳು ತೇವವಾಗಿಯೂ ನೆಲವು ಕೆಸರಾಗಿಯೂ ಇದ್ದುದರಿಂದ ಕೈಗಾಗಲಿ, ಕಾಲಿಗಾಗಲಿ ಅವು ಸರಿಯಾದ ಹಿಡಿತಕ್ಕೆ ಆಧಾರವಾಗಿರಲಿಲ್ಲ. ಹೀಗೆ ಅವನು ಆ ಭಯಂಕರವಾದ ಗ್ರಾಮಸಾರದ ಮಧ್ಯದಲ್ಲಿ ಕಷ್ಟದಿಂದ ಹೋಗುತ್ತಿದ್ದನು. ಗಾಳಿಗಾಗಿ ಬಿಟ್ಟಿದ್ದ ಮೇಲ್ಗಡೆಯ ರಂಧ್ರಗಳಿಂದ ಬಹಳ ಹೊತ್ತಿಗೊಂದಾವೃತ್ತಿಯಂತೆ ಸ್ವಲ್ಪ ಸ್ವಲ್ಪ ಬೆಳಕು ಕಾಣುತ್ತಿತ್ತು. ಈ ಬೆಳಕು ಬಿದ್ದರೂ ಮಧ್ಯಾಹ್ನದ ಉರಿ ಬಿಸಿಲು ಬೆಳ್ದಿಂಗಳಂತೆ ಕಾಣುತ್ತ ಒಳಗೆ ಬಹಳ ಭಯಂಕರವಾಗಿರುತ್ತಿತ್ತು. ಉಳಿದ ಸ್ಥಳದಲ್ಲೆಲ್ಲವೂ, ಮಬ್ಬು, ವಿಷದ ಗಾಳಿ, ಕತ್ತಲೆ, ಕಪ್ಪು, ತುಂಬಿತ್ತು. ಜೀನ್ ವಾಲ್ಜೀನನಿಗೆ ಹಸಿವೂ ಬಾಯಾರಿಕೆಯೂ ಆಯಿತು. ಅದರಲ್ಲಿ ಬಾಯಾರಿಕೆಯಂತೂ ಬಹಳವಾಯಿತು. ಸಮುದ್ರದ ಹಾಗೆ ನೀರಿದ್ದರೂ ದಾಹಶಾಂತಿಗಾಗಿ ಕುಡಿಯಲು ಮಾತ್ರ ನೀರು ಇರಲಿಲ್ಲ. ಶುದ್ಧವಾದ ಮತ್ತು ಮಿತವಾದ ಆಹಾರ ವಿಹಾರಗಳಿಂದ ಅದ್ಭುತ

ವಾಗಿ ಬೆಳೆದು ವಯೋಧರ್ಮದಿಂದ ಸ್ವಲ್ಪವೂ ಕುಂದದೆ ಇದ್ದ ಅವನ ಶಕ್ತಿಯು ಕಡೆಗೆ ಈಗ ಸೋಲಲಾರಂಭವಾಯಿತು. ಅವನಿಗೆ ಆಯಾಸವು ಹೆಚ್ಚುತ್ತ ಬಂತು. ಶಕ್ತಿ ಕುಂದಿದ ಹಾಗೆಲ್ಲ, ಅವನು ಹೊತ್ತಿದ್ದ ಹೊರೆಯು ಭಾರವು ಅಧಿಕವಾಗಿ ಕಂಡಿತು. ಪ್ರಾಯಶಃ ಸತ್ತೇಹೋಗಿದ್ದನೆಂದು ಅವನು ತಿಳಿದಿದ್ದ ಮೇರಿಯಸ್ಸನು, ಹೆಣ ದಂತೆ ಅವನಿಗೆ ಬಹಳ ಭಾರವಾಗಿ ತೋರಿದನು. ಅವನ ಎದೆಯು ಹೆಚ್ಚಾಗಿ ಒತ್ತದಂತೆಯೂ, ಅವನಿಗೆ ಯಾವಾಗಲೂ ಉಸಿರಾಡಿಸು ವುದಕ್ಕೆ ತಕ್ಕಷ್ಟು ಅನುಕೂಲತೆಯಿರುವಂತೆಯೂ ಜೀನ್ ವಾಲ್ಜೀ ನನು ಅವನನ್ನು ಹೊತ್ತಿದ್ದನು. ಜೀನ್ ವಾಲ್ಜೀನನ ಕಾಲಿನ ಸಂದಿಗಳಲ್ಲಿ ಇಲಿಗಳು ವೇಗವಾಗಿ ಓಡಿಯಾಡುತ್ತಿದ್ದವು. ಅವು ಗಳಲ್ಲಿ ಒಂದು ಗಾಬರಿಯಾಗಿ ಇವನನ್ನು ಕಚ್ಚಿಯೂ ಬಿಟ್ಟಿತು. ಆಗಾಗ, ಆ ಚರಂಡಿಯ ಬಾಗಿಲುಗಳಿಂದ ಶುದ್ಧ ವಾಯುವು ಬರುತ್ತಿದ್ದಿತು. ಇದರಿಂದ ಇವನಿಗೆ ಸ್ವಲ್ಪ ಆಯಾಸ ಪರಿಹಾರ ವಾಗುತ್ತಿತ್ತು.

ಸುಮಾರು ಮಧ್ಯಾಹ್ನದ ೩ ಗಂಟೆಯ ಸಮಯಕ್ಕೆ ಅವನು ದೊಡ್ಡ ಚರಂಡಿಯ ಬಳಿಗೆ ಬಂದನು. ಹಠಾತ್ತಾಗಿ ಇಷ್ಟು ದೊಡ್ಡ ಚರಂಡಿಯನ್ನು ನೋಡಿ ಇವನಿಗೆ ಮೊದಲು ಆಶ್ಚರ್ಯವಾಯಿತು. ಅನಂತರ ಎರಡು ಕಡೆಗಳಲ್ಲಿಯೂ ಕೈಚಾಚಿದರೂ ಗೋಡೆ ಗಳು ಸಿಕ್ಕದೆಯೂ, ತಲೆಗೆ ಕಮಾನು ತಗುಲದೆಯೂ ಇರು ವಂತಹ ಸುರಂಗ ಮಾರ್ಗಕ್ಕೆ ಆಕಸ್ಮಿಕವಾಗಿ ಬಂದುದು, ಇವನಿಗೆ ಗೋಚರವಾಯಿತು. ಆ ದೊಡ್ಡ ಚರಂಡಿಯು ಎಂಟು ಅಡಿಗಳಷ್ಟು ಅಗಲವಾಗಿಯೂ, ಏಳು ಅಡಿಗಳಷ್ಟು ಎತ್ತರವಾಗಿಯೂ ಇತ್ತು.

ಅವನು ಅಲ್ಲಿ ನಿಂತುಬಿಟ್ಟನು. ಅವನಿಗೆ ಬಹಳವಾಗಿ ಆಯಾಸ ವಾಗಿತ್ತು. ಗಾಳಿಗಾಗಿ ಬಿಟ್ಟಿದ್ದ ದೊಡ್ಡ ರಂಧ್ರದಿಂದ ಸ್ಫುಟ ವಾಗಿ ಬೆಳಕು ಬಿದ್ದಿತ್ತು. ಜೀನ್ ವಾಲ್ಜೀನನು, ಗಾಯಪಟ್ಟಿದ್ದ ಆ ಮನುಷ್ಯನನ್ನು ಸಹೋದರ ವಾತ್ಸಲ್ಯದಿಂದಲೂ, ಕನಿಕರದಿಂ ದಲೂ ಆ ಚರಂಡಿಯ ಪಕ್ಕದ ದಡದಮೇಲೆ ಮೆಲ್ಲನೆ ಇಳಿ

ಸಿದನು. ರಕ್ತಮಯವಾಗಿದ್ದ ಮೇರಿಯಸ್ಸನ ಮುಖವು, ಗಾಳಿಯ ರಂಧ್ರದಿಂದ ಬಿದ್ದ ಬೆಳಕಿನಲ್ಲಿ, ನೋಡಿದರೆ ಹೆಣದ ಮುಖದಂತೆಯೇ ಕಂಡಿತು; ಕಣ್ಣುಗಳು ಮುಚ್ಚಿದ್ದುವು; ಕೂದಲು ಕೆಂಪು ಬಣ್ಣದಲ್ಲಿ ನೆನೆದು ಒಣಗಿದ್ದ ಕುಂಚಿಗೆಗಳಂತೆ (brushes) ಗಂಡಸ್ಥಳಗಳಲ್ಲಿ ಹತ್ತಿಕೊಂಡಿದ್ದುವು; ತೋಳುಗಳು ನಿರ್ಬಲವಾಗಿ ಜೋಲು ಬಿದ್ದಿದ್ದುವು. ಅವಯವಗಳೆಲ್ಲವೂ ತಣ್ಣಗಾಗಿದ್ದುವು. ಅವನ ಕಟವಾಯಿಗಳಲ್ಲಿ ರಕ್ತವು ಸುರಿದು ಹೆಪ್ಪುಗಟ್ಟಿದ್ದಿತು. ಅವನ ಕೊರಳ ಪಟ್ಟಿಯ ಗಂಟಿನಲ್ಲಿ ರಕ್ತವು ಸುರಿ ಸುರಿದು ಹೆಪ್ಪಾಗಿತ್ತು. ಅವನ ಒಳ ಅಂಗಿಯು ಗಾಯಗಳಲ್ಲಿ ಅಂಟಿಕೊಂಡಿತ್ತು; ಮೇಲಂಗಿಯ ಬಟ್ಟೆಯು, ಶರೀರದ ಗಾಯಗಳಿಂದ ಹೊರಬಿದ್ದ ಮಾಂಸಖಂಡಗಳಿಗೆ ತಗುಲಿ ರಕ್ತ ಬರುವಂತೆ ಮಾಡುತ್ತಿದ್ದಿತು. ಜೀನ್ ವಾಲ್ಜೀನನು, ಬೆರಳುಗಳ ಕೊನೆಯಿಂದ ಉಡುಪುಗಳನ್ನು ಓರೆಮಾಡಿ ಅವನ ಎದೆಯ ಮೇಲೆ ತನ್ನ ಕೈಯನ್ನಿಟ್ಟನು. ಎದೆಯು ಇನ್ನೂ ಮಿಡಿಯುತ್ತಿದ್ದಿತು. ಜೀನ್ ವಾಲ್ಜೀನನು ತನ್ನ ಒಳ ಅಂಗಿಯನ್ನು ಹರಿದು ಗಾಯಗಳಿಗೆ ಸಾಧ್ಯವಾದ ಮಟ್ಟಿಗೆ ಕಟ್ಟುಗಳನ್ನು ಕಟ್ಟಿ, ಹರಿಯುತ್ತಿದ್ದ ರಕ್ತವನ್ನು ನಿಲ್ಲಿಸಿದನು. ಅನಂತರ ಆ ಮಂಕು ಬೆಳಕಿನಲ್ಲಿ, ಇನ್ನೂ ಸ್ಮೃತಿಯಿಲ್ಲದೆ ಮೃತನಾದವನಂತೆ ಬಿದ್ದಿದ್ದ ಅವನ ಮೇಲೆ ಜೀನ್ ವಾಲ್ಜೀನನು ಬಾಗಿ, ಯಾವುದೋ ಹೇಳಲಾರದಂತಹ ವೈರದೃಷ್ಟಿಯಿಂದ ಅವನನ್ನು ನೋಡಿದನು.

ಮೇರಿಯಸ್ಸನ ಬಟ್ಟೆಗಳನ್ನು ತೆಗೆದಾಗ ಅವನ ಜೇಬುಗಳಲ್ಲಿ ಎರಡು ಪದಾರ್ಥಗಳು ಅವನಿಗೆ ಸಿಕ್ಕಿದುವು. ಹಿಂದಿನ ದಿನ ಇಟ್ಟು ಮರೆತಿದ್ದ ರೊಟ್ಟಿಯೂ ಮತ್ತು ಮೇರಿಯಸ್ಸನ ಜೇಬಿನ ಪುಸ್ತಕವೂ (Pocket Book). ಅವನು ರೊಟ್ಟಿಯನ್ನು ತಿನ್ನುತ್ತ ಪುಸ್ತಕವನ್ನು ತೆರೆದನು. ಮೊದಲನೆಯ ಪುಟದಲ್ಲಿ ಮೇರಿಯಸ್ಸನು ಬರೆದಿದ್ದ ನಾಲ್ಕು ಪಙ್ಕ್ತಿಗಳು ಅವನ ಕಣ್ಣಿಗೆ ಬಿದ್ದುವು. ಅವನ್ನು ನೆನಪಿನಲ್ಲಿಡಬೇಕು.

'ನನ್ನ ಹೆಸರು ಮೇರಿಯಸ್ ಪಾಂಟ್‌ಮರ್ಸಿ. ನನ್ನ ಶವವನ್ನು



ಗಾಯಂಪಟ್ಟಿದ್ದವನನ್ನು ಚರಂಡಿಯ ದಡದಮೇಲೆ ಇಳಿಸಿದುದು

ಪೆರೆಯಿಸ್ ಬೀದಿಯ ರೂ ಡಿ ಫ್ಯೈಲ್ಸ್ ಡ್ಯೂ ಕಲ್ವೇರ್‌ನ, ೬ನೆಯ ನಂಬರು ಮನೆಯಲ್ಲಿರುವ ನಮ್ಮ ತಾತನಾದ ಎಂ. ಜಿಲ್ಲೆ ನಾರ್ಮಂಡ್ ಎಂಬಾತನ ಬಳಿಗೆ ಹೊತ್ತುಕೊಂಡು ಹೋಗತಕ್ಕದ್ದು.'

ಗಾಳಿಯ ರಂಧ್ರದಿಂದ ಬಿದ್ದಿದ್ದ ಬೆಳಕಿನಲ್ಲಿ ಜೀನ್ ವಾಲ್ಜೀನನು ಈ ನಾಲ್ಕು ಪಙ್ಕ್ತಿಗಳನ್ನು ಓದಿ, ಆಲೋಚನೆಯಲ್ಲಿ ಮುಳುಗಿದವನಂತೆ ಅದನ್ನೇ 'ರೂ ಡಿ ಫ್ಯೈಲ್ಸ್ ಡ್ಯೂ ಕಲ್ವೇರ್, ನಂಬರು ೬, ಮಾನ್‌ಸಿಯೂರ್ ಜಿಲ್ಲೆನಾರ್ಮಂಡ್,' ಎಂದು ಮೆಲ್ಲನೆ ಮತ್ತೆ ಮತ್ತೆ ಉಚ್ಚರಿಸುತ್ತ ಒಂದು ಕ್ಷಣ ಕಾಲ ಸ್ತಬ್ಧನಾಗಿ ನಿಂತನು. ಅನಂತರ ಆ ಪುಸ್ತಕವನ್ನು ಮತ್ತೆ ಮೇರಿಯಸ್ಸನ ಜೇಬಿನಲ್ಲಿಟ್ಟು ರೊಟ್ಟಿಯನ್ನು ತಿಂದನು. ಅದರಿಂದ ಅವನಿಗೆ ಸ್ವಲ್ಪ ಶಕ್ತಿ ಮತ್ತೆ ಬಂತು. ಪುನಃ ಮೇರಿಯಸ್ಸನನ್ನು ಬೆನ್ನಿನ ಮೇಲೆ ಹೊತ್ತು ಅವನ ತಲೆಯನ್ನು ಎಚ್ಚರಿಕೆಯಿಂದ ತನ್ನ ಬಲಭುಜದ ಮೇಲೆ ಇಟ್ಟುಕೊಂಡು ಚರಂಡಿಯಲ್ಲಿ ಇಳಿಯಲಾರಂಭಿಸಿದನು. ಆ ದೊಡ್ಡ ಚರಂಡಿಯು ಸುಮಾರು ಆರು ಮೈಲಿಗಳ ಉದ್ದವಿತ್ತು.

ತಾನು ಪ್ಯಾರಿಸ್ ನಗರದ ಮಧ್ಯಭಾಗದಲ್ಲಿಲ್ಲವೆಂತಲೂ, ಊರು ಹೊರಗಿನ ಸಾಲು ಮರಗಳ ಮಾರ್ಗದ ಸಮೀಪದಲ್ಲಿರುವೆನೆಂತಲೂ ಅವನು ಮನಸ್ಸಿನಲ್ಲಿ ನಿರ್ಧರಿಸಿಕೊಂಡನು. ಬೀದಿಗಳು ಕಡಿಮೆಯಾಗಿರುವ ಕಡೆಗಳಲ್ಲಿ ವಾಯುರಂಧ್ರಗಳೂ ಸಹ ಕಡಿಮೆಯಾಗಿಯೇ ಇದ್ದುವು. ಈಗ ಜೀನ್ ವಾಲ್ಜೀನನ ಸುತ್ತಲೂ ಕತ್ತಲೆಯು ದಟ್ಟವಾಗಿ ಕವಿಯಿತು. ಇಷ್ಟಾದರೂ ಅವನೇನೋ ಆ ಅಂಧಕಾರದಲ್ಲಿ ತಡಕಿಕೊಂಡು ಮುಂದಮುಂದಕ್ಕೆ ಹೋಗುತ್ತಲೇ ಇದ್ದನು.

ಈ ಅಂಧಕಾರವು ಕಡೆಗೆ ಬಹಳ ಭಯಂಕರವಾಯಿತು. ಅವನು ಒಳಕ್ಕೆ ನೀರು ಬರುತ್ತಿದ್ದ ಬಾಗಿಲಿಗೆ, ಎಂದರೆ ಕೆಸರಿನ ಬಚ್ಚಲಿಗೇ ಬಂದನು. ಅಲ್ಲಿ, ಪದೇ ಪದೇ ಮಳೆ ಸುರಿದು ನೆಲವು ಕೊರೆದು ಕೊಚ್ಚೆಯಿಂದ ಉಸುಬಾಗಿದ್ದಿತು.

---

ಜೀನ್ ವಾಲ್ಜೀನನು ನಡೆದು ಹೋಗುತ್ತಿದ್ದ ನೆಲವು ಬಹಳವಾಗಿ ಜಾರುತ್ತಿದ್ದಿತು. ಹೋಗ ಹೋಗುತ್ತ ಅವನು ಕೆಸರಿನೊಳಕ್ಕೆ ಇಳಿದನು. ಮೇಲ್ಗಡೆಯಲ್ಲಿ ನೀರೂ ತಳದಲ್ಲಿ ಕೆಸರೂ ತುಂಬಿತ್ತು. ಅವನು ಇದನ್ನು ದಾಟಿ ಹೋಗಲೇಬೇಕಾಯಿತು. ಹಿಂದಿರುಗಿ ಹೋಗುವುದು ಅಸಾಧ್ಯವಾಗಿದ್ದಿತು. ಮೇರಿಯಸ್ಸನ ಪ್ರಾಣವು ಹೋಗುವುದರಲ್ಲಿತ್ತು; ಜೀನ್ ವಾಲ್ಜೀನನಿಗೆ ಬಹಳ ದಣಿವಾಗಿತ್ತು. ಅವನು ಇನ್ನೆಲ್ಲಿ ತಾನೇ ಹೋದಾನು! ಹಾಗೆಯೇ ಮುಂದೆ ಹೊರಟನು. ಸ್ವಲ್ಪ ದೂರ ಹೋಗುವವರೆಗೆ ಕೊಚ್ಚೆಯು ಬಹಳ ಆಳವಾಗಿದ್ದಂತೆ ತೋರಲಿಲ್ಲ. ಮುಂದಕ್ಕೆ ಹೋದ ಹಾಗೆಲ್ಲಾ ಅವನ ಹೆಜ್ಜೆಗಳು ಕೆಳಕ್ಕೆ ಇಳಿಯುತ್ತ ಬಂದವು. ಸ್ವಲ್ಪ ಹೊತ್ತಿನಲ್ಲಿಯೇ ಕೆಸರು ಮೊಣಕಾಲಿನ ಅರ್ಧದವರೆಗೂ ಬಂತು. ನೀರು ಮೊಣಕಾಲಿನ ಮೇಲಕ್ಕೆ ಬಂತು. ಮೇರಿಯಸ್ಸನನ್ನು ಎರಡು ತೋಳುಗಳಿಂದಲೂ ನೀರಿನ ಮೇಲ್ಗಡೆ ಸಾಧ್ಯವಾದಷ್ಟು ಎತ್ತರವಾಗಿ ಹಿಡಿದುಕೊಂಡು ಮುಂದಕ್ಕೆ ನಡೆದು ಹೋದನು. ಈ ವರೆಗೆ ಕೆಸರು ಮೊಣಕಾಲವರೆಗೂ, ನೀರು ಸೊಂಟದವರೆಗೂ ಬಂದುವು. ಇನ್ನು ಹಿಂದಿರುಗುವುದು ಅಸಾಧ್ಯವೇ ಆಯಿತು. ಹೋಗ ಹೋಗುತ್ತ ಹೆಜ್ಜೆ ಹೆಜ್ಜೆ ಆಳಕ್ಕೆ ಇಳಿಯುತ್ತಲೇ ಇದ್ದನು. ಒಬ್ಬ ಮನುಷ್ಯನ ಭಾರವನ್ನು ತಡೆಯಬಹುದಾದ ಈ ಕೆಸರಿನಲ್ಲಿ ಇಬ್ಬರ ಭಾರವು ನಿಲ್ಲಲು ಸಾಧ್ಯವಾಗಿರಲಿಲ್ಲ. ಮೇರಿಯಸ್ಸನೂ ಜೀನ್ ವಾಲ್ಜೀನನೂ ಬೇರೆ ಬೇರೆಯಾಗಿ ನಡೆದು ಹೋಗಲು ಇಷ್ಟು ಕಷ್ಟವಾಗುತ್ತಿರಲಿಲ್ಲ. ಆದರೂ ಜೀನ್ ವಾಲ್ಜೀನನು ಈ ಸಾಯುವ ಹೆಣವನ್ನು ಹೊತ್ತುಕೊಂಡು ಮುಂದುವರಿದು ಹೋಗುತ್ತಲೇ ಇದ್ದನು.

ನೀರು ಕಂಕುಳವರೆಗೂ ಬಂತು. ಇನ್ನೇನು! ತಾನು ಮುಳುಗಿಹೋದೆನೆಂದೇ ಅವನ ಮನಸ್ಸಿಗೆ ತೋರಿತು. ಅವನು

ಆ ಕಸರಿನಲ್ಲಿ ಚಲಿಸುವುದೇ ಬಹು ಕಷ್ಟವಾಯಿತು. ಇಷ್ಟಾದರೂ, ಮೇರಿಯುಸ್ಸನನ್ನು ಮೇಲಕ್ಕೆ ಹಿಡಿದುಕೊಂಡು ಅಸಾಧಾರಣವಾದ ಶಕ್ತಿಯನ್ನುಪಯೋಗಿಸಿ, ಮುಂದಕ್ಕೆ ಹೋಗುತ್ತಿರುವಲ್ಲಿ ಇನ್ನೂ ಆಳಕ್ಕೇ ಇಳಿದನು. ಈಗ ಅವನ ತಲೆಯು ಮಾತ್ರ ನೀರಿನ ಮೇಲೆ ಕಾಣುತ್ತಿದ್ದಿತು. ತೋಳುಗಳು ಮೇರಿಯುಸ್ಸನನ್ನು ಎತ್ತಿ ಹಿಡಿದಿದ್ದುವು.

ಇನ್ನೂ ಆಳಕ್ಕೆ ಇಳಿದನು. ನೀರಿನಿಂದ ತಪ್ಪಿಸಿಕೊಂಡು ಉಸಿರಾಡಲು ಅನುಕೂಲಿಸುವಂತೆ ಮುಖವನ್ನು ಮೇಲಕ್ಕೆ ಚಾಚಿದನು. ಇಂತಹ ಗಹನವಾದ ಕತ್ತಲೆಯಲ್ಲಿ ಯಾರಾದರೂ ಅವನನ್ನು ನೋಡಿದ್ದರೆ, ಅದು ಕತ್ತಲೆಯಲ್ಲಿ ತೇಲಾಡುವ ಮೊಗವಾಡವೆಂದು ಹೇಳುತ್ತಿದ್ದರು.

ಜೀನ್ ವಾಲ್ಜೀನನು ಪ್ರಾಣದ ಮೇಲಿನ ಆಶೆಯನ್ನು ತೊರೆದು, ಕಟ್ಟಕಡೆಯ ಪ್ರಯತ್ನವನ್ನು ಮಾಡಿ, ತನ್ನ ಕಾಲನ್ನು ನೂಕಿದನು. ಯಾವುದೋ ಗಟ್ಟಿಯಾದ ಪದಾರ್ಥವು ಕಾಲಿಗೆ ಬಡಿಯಿತು. ಸ್ವಲ್ಪ ಆಧಾರ ಸಿಕ್ಕಿತು. ಅದು ಮತ್ತೆ ಪ್ರಾರಂಭವಾದ ನೆಲದ ಭಾಗವು. ಅವನು ಈ ಆಧಾರದಿಂದ ಮೇಲಕ್ಕೆ ಎದ್ದು, ಮೈನುಲಿದು ನುಗ್ಗಿ, ಆ ಗಟ್ಟಿ ನೆಲದ ಮೇಲೆ ಬೇರೂರಿದಂತೆ ನಿಂತನು. ಅದು ಅವನ ಜೀವಿತ ಪ್ರಾಸಾದವನ್ನು ಮತ್ತೆ ಹತ್ತುವ ಸೋಪಾನ ಪಙ್ಕ್ತಿಯ ಮೊದಲನೆಯ ಮೆಟ್ಟಲೆಂಬಂತೆ ಅವನ ಮನಸ್ಸಿಗೆ ತೋರಿತು.

ನೀರಿನಿಂದ ಹೊರಗೆ ಬಂದಾಗ, ಕಾಲು ಕಲ್ಲಿಗೆ ಬಡಿದು, ಮೊಣಕಾಲು ನೆಲಕ್ಕೂರಿ ಅವನು ಬಿದ್ದುಬಿಟ್ಟನು. ಇದು ಉತ್ತಮವೇ ಆಯಿತೆಂದು ಅವನಿಗೆ ತೋರಿತು. ಅವನು ಸ್ವಲ್ಪ ಹಾಗೆಯೇ ಇರುವಲ್ಲಿ, ಅವನ ಆತ್ಮವು ಭಗವಂತನ ಧ್ಯಾನದಲ್ಲಿ ಲೀನವಾಯಿತು.

ಮತ್ತೆ ಅವನು ತನ್ನ ಪ್ರಯಾಣವನ್ನು ಮುಂದುವರಿಸಿದನು. ಈ ಜಲಾಶಯದಲ್ಲಿ ಅವನ ಪ್ರಾಣವು ಹೋಗದೆ ಉಳಿದಿದ್ದರೂ,

ಅವನ ಶಕ್ತಿಯು ಮಾತ್ರ ಕುಂದಿಹೋಗಿದ್ದಿತು. ಆಯಾಸವು ಮಿತಿ ಮೀರಿತ್ತು. ಸಲಸಲಕ್ಕೂ, ಮೂರು ನಾಲ್ಕು ಅಡಿಗಳಿಗೊಂದಾವೃತ್ತಿ, ಅವನು ಉಸಿರನ್ನೆಳೆದುಕೊಂಡು ಗೋಡೆಗೆ ಒರಗಿಕೊಳ್ಳಬೇಕಾಯಿತು. ಅವನು ಒಂದು ಸಲ, ಮೇರಿಯುಸ್ಸನನ್ನು ತಿರುಗಿಸಿ ಬೇರೆ ರೀತಿಯಾಗಿ ಹಿಡಿದುಕೊಳ್ಳುವುದಕ್ಕಾಗಿ, ಆ ಕಾಲುವೆಯ ಅಂಚಿನ ಮೇಲೆ ಕುಳಿತುಕೊಳ್ಳಬೇಕಾಯಿತು. ಆಗ ಅಲ್ಲಿಯೇ ನಿಂತುಬಿಡೋಣವೆಂದಾಲೋಚಿಸಿದನು. ಆದರೆ, ಶಕ್ತಿ ಕುಂದಿದರೂ ಅವನ ಉತ್ಸಾಹವು ಕುಂದಿರಲಿಲ್ಲ. ಆದಕಾರಣ, ಮತ್ತೆ ಮೇಲಕ್ಕೆ ಎದ್ದು ಪ್ರಯಾಣದಲ್ಲಿ ಮುಂದುವರಿದನು.

ಸ್ವಲ್ಪ ಹೊತ್ತಿನಲ್ಲಿಯೇ, ಆ ಮಾರ್ಗದ ಕಡೆಯ ಭಾಗದಲ್ಲಿ, ಬಹು ದೂರದಲ್ಲಿದ್ದ ಬೆಳಕು ಅವನ ಕಣ್ಣಿಗೆ ಬಿತ್ತು. ಜೀನ್ ವಾಲ್ಜೀನನ ಆಯಾಸವು ಮಾಯವಾಯಿತು. ಮೇರಿಯುಸ್ಸನ ಭಾರವೇ ತೋರಲಿಲ್ಲ. ಮತ್ತೆ, ಕಬ್ಬಿಣದಂತಿದ್ದ ಅವನ ಮೊಣಕಾಲುಗಳಲ್ಲಿ ಮೊದಲಿನ ಶಕ್ತಿಯೇ ಮೂಡಿತು. ಸಾಮಾನ್ಯವಾಗಿ ನಡೆದುಹೋಗದೆ, ಮುಂದಕ್ಕೆ ಓಡಿಹೋದನೆಂದೇ ಹೇಳಬಹುದು.

ಕಟ್ಟಕಡೆಗೆ ದ್ವಾರದ ಬಳಿಗೆ ಬಂದು, ಅಲ್ಲಿ ನಿಂತುಬಿಟ್ಟನು. ಅಲ್ಲಿ ಬಾಗಿಲಿದ್ದರೂ ಅವನು ಹೊರಗೆ ಹೋಗಲು ಆಸ್ಪದವಿರಲಿಲ್ಲ.

ಅಲ್ಲಿಯ ಕಮಾನಿಗೆ, ಸಲಾಕಿಗಳಿಂದ ಮಾಡಿದ ಒಂದು ಬಾಗಿಲಿದ್ದಿತು. ಆ ಬಾಗಿಲಿಗೂ ಕಲ್ಲಿನ ಕಮಾನಿಗೂ ಸೇರಿಸಿ ಒಂದು ಬಲವಾದ ದೊಡ್ಡ ಬೀಗವನ್ನು ಹಾಕಿದ್ದರು. ಈ ಬೀಗವು ತುಕ್ಕು ಹಿಡಿದು ಕೆಂಪಾಗಿ ಒಂದು ದೊಡ್ಡ ಇಟ್ಟಿಗೆಯಂತೆ ಕಾಣುತಿತ್ತು. ಈಗ ಸಾಯಂಕಾಲ ಎಂಟೂವರೆ ಗಂಟೆಯ ಹೊತ್ತಾಗಿದ್ದಿರಬಹುದು.

ಜೀನ್ ವಾಲ್ಜೀನನು, ಆ ಒಣಗಿದ್ದ ನೆಲದ ಮೇಲೆ ಮೇರಿಯುಸ್ಸನನ್ನು ಗೋಡೆಗೆ ಒರಗಿಸಿ ಕೂರಿಸಿ, ತಾನು ಬಾಗಿಲ ಬಳಿಗೆ ಹೋಗಿ, ಸಲಾಕಿಗಳನ್ನು ತನ್ನ ಎರಡು ಕೈಗಳಿಂದಲೂ ಬಲವಾಗಿ ಹಿಡಿದು ಬಗ್ಗಿಸಲು ಪ್ರಯತ್ನಿಸಿದನು. ಅವನ ಪ್ರಯತ್ನವು ಸಾಗ

ಲಿಲ್ಲ. ಬಾಗಿಲು ಅಲ್ಲಾಡಲಿಲ್ಲ. ಜೀನ್ ವಾಲ್ಜೀನನು ಆ ಸಲಾಕಿಗಳಲ್ಲಿ ಸುಲಭವಾಗಿದ್ದುದನ್ನು ಎಳೆದುಕೊಂಡು, ಬಾಗಿಲನ್ನು ಮೀಟಿ ಎತ್ತುವುದಕ್ಕಾಗಲಿ, ಅಥವಾ ಬೀಗವನ್ನು ಒಡೆಯುವುದಕ್ಕಾಗಲಿ ಅದನ್ನು ಉಪಯೋಗಿಸಿಕೊಳ್ಳಬೇಕೆಂದು, ಪ್ರತಿಯೊಂದು ಸಲಾಕಿಯನ್ನೂ ಹಿಡಿದು ಜಗ್ಗಿದನು. ಒಂದಾದರೂ ಅಲುಗಲಿಲ್ಲ. ಹುಲಿಯ ದವಡೆಯಲ್ಲಿಯ ಹಲ್ಲುಗಳಿಗಿಂತಲೂ ಅವು ಬಿಗಿಯಾಗಿದ್ದುವು.

ಅನಂತರ ಬಾಗಿಲ ಕಡೆಗೆ ಬೆನ್ನನ್ನು ತಿರುಗಿಸಿ, ಇನ್ನೂ ಚಲಿಸದೆ ಬಿದ್ದಿದ್ದ ಮೇರಿಯುಸ್ಸನ ಪಕ್ಕದಲ್ಲಿ ಉರುಳಿಕೊಂಡು, ಮೊಣಕಾಲುಗಳ ನಡುವೆ ತಲೆಯನ್ನಿಟ್ಟುಕೊಂಡು ಬೋರಲಾಗಿ ಬಿದ್ದನು. ಹೊರಗೆ ಹೋಗಲು ಮಾರ್ಗವಿಲ್ಲ. ಇದೇ ಅವನ ಕಟ್ಟಕಡೆಯ ದುಃಖವು. ಉಕ್ಕಿಬರುತ್ತಿರುವ ಇಂತಹ ದುಃಖದಲ್ಲಿ, ಅವನು ಯಾರ ವಿಷಯವಾಗಿ ಆಲೋಚಿಸಿದುದು? ತನ್ನ ವಿಷಯವಾಗಿಯೂ ಅಲ್ಲ; ಮೇರಿಯುಸ್ಸನ ವಿಷಯವಾಗಿಯೂ ಅಲ್ಲ. ಕೋಸೆಟ್ಟಳ ವಿಷಯವಾಗಿ.

ಈ ಪ್ರಾಣಾಪಾಯ ಸಮಯದಲ್ಲಿ, ಅವನ ಭುಜದ ಮೇಲೆ ಯಾರೋ ಕೈಯನ್ನಿಟ್ಟು, 'ಅರ್ಧ ಪಾಲನ್ನು ಹಂಚಿ ಕೊಡು,' ಎಂದ, ಮೆಲ್ಲನೆಯ ಶಬ್ದವು ಕೇಳಿಸಿತು.

ಅವನ ಮುಂದೆ ಒಬ್ಬ ಪುರುಷನು ನಿಂತಿದ್ದನು. ಇವನು ಒಂದು ದೊಡ್ಡ ಮೇಲಂಗಿಯನ್ನು ಹಾಕಿಕೊಂಡು, ತನ್ನ ಪಾದರಕ್ಷೆಗಳನ್ನು ಎಡಗೈಯಲ್ಲಿ ಹಿಡಿದು, ಬರಿಗಾಲಲ್ಲಿದ್ದನು. ಅವನು ಶಬ್ದವಾಗದಂತೆ ಜೀನ್ ವಾಲ್ಜೀನನ ಬಳಿಗೆ ಬರಬೇಕೆಂಬ ಉದ್ದೇಶದಿಂದ ಆ ಪಾದರಕ್ಷೆಗಳನ್ನು ತೆಗೆದು ಬಂದಿದ್ದನೆಂಬುದು ಪ್ರತ್ಯಕ್ಷವಾಗಿತ್ತು.

ಅವನು ಥೆನಾರ್ಡಿಯರನು. ತನ್ನ ಗುರುತನ್ನು ಈ ಥೆನಾರ್ಡಿಯರನು ಹಿಡಿಯಲಿಲ್ಲವೆಂಬುದು ಜೀನ್ ವಾಲ್ಜೀನನಿಗೆ ಆಗಲೇ ಗೊತ್ತಾಯಿತು.

ಜೇನ್ ವಾಲ್ಜೀನ್—ನೀನು ಹೇಳುವುದೇನು ?

ಥೆನಾರ್ಡಿಯರ್—ಆ ಮನುಷ್ಯನನ್ನು ಕೊಂದಿರುವೆಯಷ್ಟೆ! ಒಳ್ಳೆಯದಾಯಿತು. ಇದೋ, ನನ್ನ ಭಾಗಕ್ಕೆ, ಈ ಬಾಗಿಲ ಬೀಗದ ಕೈಯೂ ನನ್ನಲ್ಲಿರುವುದು.

ಜೇನ್ ವಾಲ್ಜೀನನಿಗೆ ವಿಷಯವೇನೆಂಬುದು ಗೊತ್ತಾಗುತ್ತಾ ಬಂತು. ಥೆನಾರ್ಡಿಯರನು ಇವನನ್ನು ಕೊಲೆಗಾರನೆಂದು ಊಹಿಸಿದ್ದನು.

ಥೆನಾರ್ಡಿಯರ್—ಅಯ್ಯಾ! ಅವನ ಜೇಬುಗಳಲ್ಲಿ ಏನಿತ್ತೆಂಬು ದನ್ನು ಹುಡುಕಿ ನೋಡದೆಯೇ ನೀನು ಆ ಮನುಷ್ಯನನ್ನು ಕೊಂದಿರಲಾರೆ. ಸಲ್ಲಬೇಕಾದ ನನ್ನ ಅರ್ಧ ಭಾಗವನ್ನು ನನಗೆ ಕೊಟ್ಟುಬಿಡು, ನಿನಗೆ ಬಾಗಿಲನ್ನು ತೆರೆಯುವೆನು.

ಜೇನ್ ವಾಲ್ಜೀನನು ಮೇರಿಯುಸ್ಸನ ಅಂಗಿಯ ಜೇಬುಗಳಲ್ಲಿ ಹುಡುಕಿ ಒಂದು ಚಿನ್ನದ ನಾಣ್ಯವನ್ನೂ ಎರಡು ಬೆಳ್ಳಿಯ ನಾಣ್ಯ ಗಳನ್ನೂ ತೆಗೆದನು.

ಥೆನಾರ್ಡಿಯರನು ಮೇಲಣ ತುಟಿಯನ್ನು ಮುಂದಕ್ಕೆ ಚಾಚಿ, 'ನೀನು ಅವನನ್ನು ಕೊಂದುದರಿಂದ ಹೆಚ್ಚಾದ ಪ್ರಯೋಜನವು ದೊರೆತಂತಾಗಲಿಲ್ಲ,' ಎಂದನು.

ಅನಂತರ ಅವನು ಕೇವಲ ಸಲಿಗೆಯಿಂದ ಜೇನ್ ವಾಲ್ಜೀನನ ಜೇಬುಗಳನ್ನೂ ಮೇರಿಯುಸ್ಸನ ಜೇಬುಗಳನ್ನೂ ಹುಡುಕಿ ನೋಡಿ ದನು.

ಥೆನಾರ್ಡಿಯರನು ಮೇರಿಯುಸ್ಸನ ಅಂಗಿಯಲ್ಲಿ ಹುಡುಕು ತ್ತಿದ್ದಾಗ, ಜೇನ್ ವಾಲ್ಜೀನನಿಗೆ ಗೋಚರವಿಲ್ಲದಂತೆ, ಆ ಅಂಗಿಯ ಕೊನೆಯಲ್ಲಿ ಒಂದು ಚೂರು ಬಟ್ಟೆಯನ್ನು ಹರಿದುಕೊಳ್ಳಲು ಅವನಿಗೆ ಅವಕಾಶ ಸಿಕ್ಕಿತು.

ಇದಾದ ಮೇಲೆ ಅವನು ತನ್ನ ಅಂಗಿಯೊಳಗಿನಿಂದ ಬೀಗದ ಕೈಯನ್ನು ತೆಗೆದು, ಮೇರಿಯುಸ್ಸನನ್ನು ಜೇನ್ ವಾಲ್ಜೀನನ ಬೆನ್ನಿನ ಮೇಲಕ್ಕೆ ಎತ್ತಿ, ಅವನನ್ನು ತನ್ನ ಹಿಂದೆ ಬರುವಂತೆ ಸನ್ನೆ

ಮಾಡುತ್ತ, ಬರಿಯ ಕಾಲಿನಿಂದಲೇ ಬಾಗಿಲ ಕಡೆಗೆ ಹೋದನು. ಅನಂತರ ಹೊರಗೆ ನೋಡಿ, ಬಾಯಮೇಲೆ ಬೆರಳನ್ನಿಟ್ಟುಕೊಂಡು ಸಂದೇಹ ಗ್ರಸ್ತನಾದಂತೆ ಒಂದೆರಡು ಕ್ಷಣಗಳ ಕಾಲ ಸುಮ್ಮನೆ ನಿಂತನು. ಹೀಗೆ ಪರೀಕ್ಷಿಸಿ ನೋಡಿದ ಮೇಲೆ, ಬೀಗದ ಕೈಯನ್ನು ಬೀಗದೊಳಗಿಟ್ಟು ತಿರುಗಿಸಲು, ಅಗುಳಿಯು ಬಿಚ್ಚಿಕೊಂಡು ಬಾಗಿಲು ತೆರೆಯಿತು. ಬಾಗಿಲ ಬಡಿತವಾಗಲಿ, ಜರುಗುವ ಶಬ್ದ ವಾಗಲಿ ಇರಲಿಲ್ಲ. ಎಲ್ಲವೂ ಬಹಳ ನಿಶ್ಯಬ್ದವಾಗಿ ನಡೆಯಿತು. ಈ ಬಾಗಿಲಿನ ಕೀಲುಗಳಿಗೆ, ಬಹಳ ಎಚ್ಚರಿಕೆಯಿಂದ, ಎಣ್ಣೆ ಹಾಕಿದ್ದರು. ಇದನ್ನು ಅನೇಕಾವೃತ್ತಿ ತೆರೆದು ಮುಚ್ಚುತ್ತಿದ್ದರೆಂಬುದು ಸ್ಪಷ್ಟವಾಗಿತ್ತು. ಇದರಿಂದ, ಇಲ್ಲಿ ನಿಶಾಚರರಾದ ಕಳ್ಳರು ಗೋಪ್ಯವಾಗಿ ಬಂದು ಹೋಗುತ್ತಲೂ ತೋಳಗಳಂತೆ ಭಯಂಕರ ದುಷ್ಕಾರ್ಯಗಳನ್ನು ಮಾಡುತ್ತಲೂ ಇದ್ದರೆಂದು ಕಂಡಿತು. ಈ ಗ್ರಾಮುಸಾರದ ಬಚ್ಚಲು ಕೆಲವು ಮಂದಿ ಗುಪ್ತ ಜನರ ಗುಂಪಿನ ದುಷ್ಕಾರ್ಯಗಳಿಗೆ ಬಹಳ ಸಹಾಯವಾಗಿದ್ದಿತೆಂಬುದು ಪ್ರತ್ಯಕ್ಷವಾಗಿತ್ತು.

ಅವನು ಬಾಗಿಲನ್ನು ಅರ್ಧವುಟ್ಟಿಗೆ ತೆರೆದು, ಜೀನ್ ವಾಲ್ಜೀನನು ಹೊರಗೆ ಬರುವುದಕ್ಕೆ ಮಾತ್ರವೇ ತಕ್ಕಷ್ಟು ಮಾರ್ಗವನ್ನು ಬಿಟ್ಟು, ಮತ್ತೆ ಬಾಗಿಲನ್ನು ಮುಚ್ಚಿ, ಬೀಗದ ಕೈಯನ್ನು ಬೀಗದೊಳಗೆ ಎರಡಾವೃತ್ತಿ ತಿರುಗಿಸಿ, ಮೆಲ್ಲನೆ ಹಿಂದಕ್ಕೆ ಸರಿದು ಅಂಧಕಾರದಲ್ಲಿ ಮಾಯವಾದನು. ಅವನ ನಡಿಗೆಯು ಮೃದುವಾದ ಅಂಗಾಲಿನ, ಹುಲಿಯ ನಡಿಗೆಯಂತೆ ನಿಶ್ಯಬ್ದವಾಗಿತ್ತು.

ಜೀನ್ ವಾಲ್ಜೀನನು ಹೊರಕ್ಕೆ ಬಂದು ಮೇರಿಯಸ್ಸನನ್ನು ಬೆನ್ನಿನಿಂದ ಮೆಲ್ಲನೆ ಜಾರಿಸಿ ನದಿಯ ದಡದಲ್ಲಿ ಇಳಿಸಿದನು.

ಅವರು ಹೊರಕ್ಕೆ ಬಂದುಬಿಟ್ಟರು. ವಿಷದ ಗಾಳಿಯೂ, ಅಂಧಕಾರವೂ ಭಯಂಕರ ಕಷ್ಟವೂ ಅವರ ಹಿಂದೆ ಉಳಿದವು. ಶುದ್ಧವಾಗಿಯೂ, ಆನಂದಕರವಾಗಿಯೂ, ಧಾರಾಳವಾಗಿ ಉಚ್ಛ್ವಾಸಿಸಲು ಯೋಗ್ಯವಾಗಿಯೂ, ಇರುವ ಸುಗಂಧ

ವಾಯುವು ಅವನ ಸುತ್ತಲೂ ಸುಳಿಯುತ್ತಿದ್ದಿತು. ಸುತ್ತ ಮುತ್ತ, ಎಲ್ಲೆಲ್ಲಿಯೂ ನಿಶ್ಶಬ್ದವಾಗಿತ್ತು. ಶುದ್ಧವಾದ ಆಕಾಶದಲ್ಲಿ, ಸೂರ್ಯಾಸ್ತಮಯವು ಮನೋಹರವಾಗಿ ಕಂಗೊಳಿಸುತ್ತಿತ್ತು. ಅನಂತರ ಮಬ್ಬಾಗುತ್ತ ಬಂತು. ಭೀತಿಯಿಂದ ಅವಿತುಕೊಳ್ಳಲು ಕತ್ತಲೆಯ ಆಚ್ಛಾದನವನ್ನಪೇಕ್ಷಿಸುವವರಿಗೆ ಹಿತಕರವಾಗಿರುವ ರಾತ್ರಿಯು ಕವಿಯಿತು.

---

ಜೀನ್ ವಾಲ್ಜೀನನು, ಮೇರಿಯಸ್ಸನ ಮೇಲೆ ಬಾಗಿ, ತನ್ನ ಬೊಗಸೆಯಲ್ಲಿ ಸ್ವಲ್ಪ ನೀರನ್ನು ತೆಗೆದು, ಅವನ ಮುಖದಮೇಲೆ ಮೆಲ್ಲನೆ ಚಿಮುಕಿಸಿದನು.

ಮತ್ತೊಂದಾವೃತ್ತಿ ನದಿಯೊಳಕ್ಕೆ ತನ್ನ ಕೈಯನ್ನು ಇಡುತ್ತಿರುವಾಗ, ಹಠಾತ್ತಾಗಿ ಅವನ ಮನಸ್ಸಿಗೆ ಏನೋ ಹೇಳಲಾಗದಂತಹ ಕಳವಳವುಂಟಾಯಿತು. ತಿರುಗಿ ಸುತ್ತಲೂ ನೋಡಲು ಜೇವರ್ಟನು ಕಣ್ಣಿಗೆ ಬಿದ್ದನು.

ಹಿಂದೆ ಹೇಳಿದಂತೆ ಜೀನ್ ವಾಲ್ಜೀನನ ಮುಖಭಾವವೇ ವ್ಯತ್ಯಾಸ ಹೊಂದಿದ್ದುದರಿಂದ ಜೇವರ್ಟನಿಗೆ ಇವನ ಗುರುತು ತಟ್ಟನೆ ಸಿಕ್ಕಲಿಲ್ಲ. ಆದಕಾರಣ ಅವನು ಶಾಂತಭಾವದಿಂದ ತಟ್ಟನೆ, 'ನೀನು ಯಾರು?' ಎಂದನು.

'ನಾನೇ?'

'ಅಹುದು, ನೀನೇ!'

'ಜೀನ್ ವಾಲ್ಜೀನ್.'

ಜೇವರ್ಟನು ತನ್ನ ಬೆತ್ತವನ್ನು ಹಲ್ಲುಗಳಿಂದ ಕಚ್ಚಿ, ಮೊಣಕಾಲನ್ನು ಬಾಗಿಸಿ, ಶರೀರವನ್ನು ತಗ್ಗಿಸಿ ತನ್ನ ಬಲವಾದ ಕೈಗಳನ್ನು ಜೀನ್ ವಾಲ್ಜೀನನ ಭುಜಗಳ ಮೇಲೆ ಇಟ್ಟು ಅವನನ್ನು ಪರೀಕ್ಷಿಸಿ ಅವನ ಗುರುತನ್ನು ಹಿಡಿದನು. ಅವರ ಮುಖಗಳೆರಡೂ ಪರಸ್ಪರ ಮುಟ್ಟುವಂತೆ ಇದ್ದುವು. ಜೇವರ್ಟನ ಮುಖಭಾವವು ಬಹಳ ಭಯಂಕರವಾಗಿದ್ದಿತು.

ಶರಭದ ಉಗುರಿನ ಹಿಡಿತಕ್ಕೆ ಸಿಕ್ಕಿದ ಸಿಂಹದಂತೆ ಜೀನ್ ವಾಲ್ಜೀನನು, ಜೇವರ್ಟನ ಹಿಡಿತದಿಂದ ನಿಶ್ಚೇಷ್ಟಿತನಾಗಿ ನಿಂತು,

'ಅಧಿಕಾರಿಯಾದ ಜೇವರ್ಟ್, ನಾನೇನೋ ಸಿಕ್ಕಿದೆ. ಅಲ್ಲದೆ, ಈ ದಿನ ಪ್ರಾತಃಕಾಲ ಮೊದಲಾಗಿ ನಾನು ನಿನ್ನ ಬಂದಿಯೆಂದೇ ತಿಳಿದುಕೊಂಡಿದ್ದೇನೆ. ನಿನಗೆ ನನ್ನ ವಿಳಾಸವನ್ನು

ತಿಳಿಸಿದುದು ನಿನ್ನಿಂದ ನಾನು ತಪ್ಪಿಸಿಕೊಳ್ಳಬೇಕೆಂಬ ಉದ್ದೇಶದಿಂದ ಅಲ್ಲ. ಇನ್ನು ನನ್ನನ್ನು ಹಿಡಿದುಕೊ. ಆದರೆ, ದಯವಿಟ್ಟು ನನಗೆ ಒಂದು ವಿಷಯವನ್ನು ಮಾತ್ರ ನಡೆಯಿಸಿ ಕೊಡು. ಈ ಗಾಯ ಪಟ್ಟ ಮನುಷ್ಯನನ್ನು ಮನೆಗೆ ಕರೆದುಕೊಂಡು ಹೋಗಿಬಿಡಲು ನನಗೆ ಸಹಾಯಮಾಡು,' ಎಂದನು.

ಜೀನ್ ವಾಲ್ಜೀನನು ಮೇರಿಯಸ್ಸನ ಅಂಗಿಯಲ್ಲಿದ್ದ ಕೈಪುಸ್ತಕವನ್ನು ತೆಗೆದು, ಮೇರಿಯಸ್ಸನು ಸೀಸದ ಕಡ್ಡಿಯಲ್ಲಿ ಬರೆದಿದ್ದ ಪುಟವನ್ನು ತೆರೆದು, ಅದನ್ನು ಜೇವರ್ಟನ ಕೈಗೆ ಕೊಟ್ಟನು.

ಮೇರಿಯಸ್ಸನು ಬರೆದಿದ್ದ ಬರೆವಣಿಗೆಯನ್ನು ಜೇವರ್ಟನು ವಿವರವಾಗಿ ಓದಿಕೊಂಡು, 'ಜಿಲ್ಲೆನಾರ್ಮಂಡ್, ರೂ ಡೆಸ್ ಫೈಲ್ಸ್ ಡ್ಯೂ ಕಲ್ವೇರ್, ನಂಬರು ೬,' ಎಂದು ಗೊಣಗುಟ್ಟಿದನು.

ತರುವಾಯ ಬಂಡಿಯವನನ್ನು ಕೂಗಲು, ಒಂದು ಕ್ಷಣದ ಮೇಲೆ, ನೀರು ತುಂಬುವ ಸ್ಥಳದಿಂದ, ಒಂದು ಬಂಡಿಯು ಇಳಿದು ನದೀತೀರಕ್ಕೆ ಬಂತು. ಮೇರಿಯಸ್ಸನನ್ನು ಹಿಂದಣ ಭಾಗದಲ್ಲಿ ಮಲಗಿಸಿ ಜೇವರ್ಟನು ಮುಂದುಗಡೆಯಲ್ಲಿ ಜೀನ್ ವಾಲ್ಜೀನನ ಪಕ್ಕದಲ್ಲಿ ಕುಳಿತುಕೊಂಡನು.

ಬಾಗಿಲನ್ನು ಮುಚ್ಚಿದಮೇಲೆ ಬಂಡಿಯು ಬಾಸ್ಟಿಲ್ ಬೀದಿಯ ಮಾರ್ಗವಾಗಿ ವೇಗವಾಗಿ ಹೋಯಿತು.

ಅವರು ಮೇರಿಯಸ್ಸನ ತಾತನ ಮನೆಯನ್ನು ಸೇರಿದಾಗ, ಅಲ್ಲಿ ಎಲ್ಲರೂ ನಿದ್ದೆಮಾಡುತ್ತಿದ್ದರು. ಆಗ ಗಂಟೆಯನ್ನು ಹೊಡೆದು, ಬಾಗಿಲು ಕಾಯುವವನನ್ನು ಎಚ್ಚರಗೊಳಿಸಿ, ಪ್ರಜ್ಞೆಯಿಲ್ಲದೆ ಇದ್ದ ಮೇರಿಯಸ್ಸನನ್ನು ಅವನ ವಶಕ್ಕೆ ಕೊಟ್ಟು ಮತ್ತೆ ಬಂಡಿಯನ್ನು ಹತ್ತಿದರು.

ಜೀನ್ ವಾಲ್ಜೀನನು, 'ಜೇವರ್ಟ್, ಇನ್ನೊಂದು ಕೆಲಸವನ್ನು ದಯೆಯಿಟ್ಟು ನಡೆಯಿಸಿ ಕೊಡಬೇಕು,' ಎಂದನು.

ಅದಕ್ಕೆ ಜೇವರ್ಟನು, ಕಠಿಣವಾಗಿ, 'ಏನದು?' ಎಂದನು.

'ಒಂದು ಕ್ಷಣಕಾಲ ಮನೆಗೆ ಹೋಗಲು ನನಗೆ ಅವಕಾಶ

ಕೊಡು ; ಅನಂತರ ನೀನು ನನ್ನ ವಿಷಯದಲ್ಲಿ ನಿನ್ನ ಇಷ್ಟಬಂದಂತೆ ಮಾಡು.’

ಜೇವರ್ಟನು ಸ್ವಲ್ಪ ಹೊತ್ತು ಮಾತನಾಡದೆ ಸುಮ್ಮನಿದ್ದು, ಗಡ್ಡವನ್ನು ತನ್ನ ನಿಲುವಂಗಿಯ ಕೊರಳ ಪಟ್ಟಿಯೊಳಕ್ಕೆ ಎಳೆದುಕೊಂಡು, ಮುಂದೆ ಇದ್ದ ಕಿಟಿಕಿಯನ್ನು ತೆರೆದು, ‘ ಗಾಡಿಯವನೇ, ರೂ ಡಿ ಎಲ್’ಹೋಂ ಆರಂ, ನಂಬರು ೭,’ ಎಂದನು.

ರೂ ಡಿ ಎಲ್’ಹೋಂ ಆರಂ ಬೀದಿಯು ಬಹಳ ಚಿಕ್ಕದಾದುದರಿಂದ ಬಂಡಿಗಳು ಪ್ರವೇಶಿಸಲು ಅವಕಾಶವಿರಲಿಲ್ಲ. ಆದಕಾರಣ ಬಂಡಿಯು ಆ ಬೀದಿಯ ಬಾಗಿಲಲ್ಲಿಯೇ ನಿಂತಿತು. ಜೇವರ್ಟನೂ ಜೀನ್ ವಾಲ್ಜೀನನೂ ಬಂಡಿಯಿಂದ ಇಳಿದು, ಬೀದಿಯೊಳಕ್ಕೆ ಪ್ರವೇಶಿಸಿದರು. ಎಂದಿನಂತೆ, ಅಲ್ಲಿ ಯಾರೂ ಇರಲಿಲ್ಲ. ಜೇವರ್ಟನು ಜೀನ್ ವಾಲ್ಜೀನನ ಹಿಂದೆಯೇ ಹೋದನು. ಅವರು ೭ನೇ ನಂಬರು ಮನೆಗೆ ತಲುಪಿದರು. ಜೀನ್ ವಾಲ್ಜೀನನು ಕದವನ್ನು ತಟ್ಟಿದನು. ಬಾಗಿಲು ತೆರೆಯಿತು.

ಜೇವರ್ಟನು, ‘ ಒಳ್ಳೆಯದು, ಆಗಲಿ,’ ಎಂದು ಹೇಳಿ, ‘ ನಾನು ಇಲ್ಲಿಯೇ ನಿನಗಾಗಿ ಕಾದಿರುವೆನು,’ ಎಂದು ಹೇಳುವನೋ ಎಂಬಂತಹ ವಿಚಿತ್ರ ಮುಖಭಾವದಿಂದ, ‘ ಹೋಗು,’ ಎಂದನು.

ಜೇವರ್ಟನ ನಡೆವಳಿಕೆಗಳಲ್ಲಿ ಇಂತಹ ರೀತಿಯು ಹಿಂದೆ ಇರಲೇ ಇಲ್ಲ. ಆದರೂ, ಬೆಕ್ಕು ಇಲಿಗೆ, ತನ್ನ ಕೈ ಎಟಕುವವರೆಗೂ ಹೋಗುವಂತೆ ಬಿಡುವ ರೀತಿಯಿಂದ, ಜೀನ್ ವಾಲ್ಜೀನನ ವಿಷಯದಲ್ಲಿ ಜೇವರ್ಟನು, ಅಹಂಕಾರದಿಂದ ನಂಬಿಕೆ ತೋರಿಸಿ ಕಳುಹಿಸಿಕೊಟ್ಟುದು ಜೀನ್ ವಾಲ್ಜೀನನಿಗೆ ಅಷ್ಟೇನೂ ಆಶ್ಚರ್ಯವಾಗಿ ಕಾಣಲಿಲ್ಲ. ಅವನು ಬಾಗಿಲನ್ನು ತೆರೆದು ಮನೆಯೊಳಕ್ಕೆ ಹೋಗಿ ಬಾಗಿಲು ಕಾಯುವವನನ್ನು ಕುರಿತು, ‘ ನಾನು ಬಂದಿರುವೆನು,’ ಎಂದು ಕೂಗಿಹೇಳಿ, ಮಹಡಿಯ ಮೇಲಕ್ಕೆ ಹತ್ತಿದನು.

ಮೊದಲನೆಯ ಅಂತಸ್ತನ್ನು ಹತ್ತಿ ಸ್ವಲ್ಪ ನಿಂತನು. ನೆಲದವರೆಗೂ ಇದ್ದ ಕಿಟಿಕಿಯ ಬಾಗಿಲು ತೆರೆದಿತ್ತು. ಜೀನ್ ವಾಲ್ಜೀ

ನನು ಸ್ವಲ್ಪ ಉಸಿರಾಡುವುದಕ್ಕಾಗಿಯೋ ಅಥವಾ ಅಕಾರಣವಾಗಿಯೋ ನಿಂತು ಈ ಕಿಟಿಕಿಯಿಂದ ಹೊರಗೆ ನೋಡಿದನು.

ಅಲ್ಲಿ ಯಾರೂ ಇರಲಿಲ್ಲ. ಜೇವರ್ಟನು ಹೊರಟು ಹೋಗಿದ್ದನು!

ಜೇವರ್ಟನು ರೂ ಡಿ ಎಲ್'ಹೋಂ ಆರಂ ಬೀದಿಯಿಂದ ಹೊರಟು, ಮೆಲ್ಲನೆ ನಡೆದುಕೊಂಡು, ನದಿಯ ಮೇಲಣ ಒಂದು ಸೇತುವೆಯ ಬಳಿಗೆ ಬಂದನು. ಸೇನ್ ನದಿಯ ಈ ಭಾಗವನ್ನು ಕಂಡರೆ ನಾವಿಕರಿಗೇ ಬಹಳ ಹೆದರಿಕೆ. ಅತಿ ವೇಗವಾಗಿ ನೀರು ಹರಿಯುತ್ತಿದ್ದ ಈ ಸ್ಥಳಕ್ಕಿಂತಲೂ ಹೆಚ್ಚು ಅಪಾಯದ ಸ್ಥಳವೇ ಇರಲಿಲ್ಲ. ಇಲ್ಲಿ ಬಿದ್ದವರನ್ನು ಮತ್ತೆ ಕಾಣಲು ಸಾಧ್ಯವಿರಲಿಲ್ಲ. ಅತ್ಯಂತ ಚತುರರಾದ ಈಜುಗಾರರೂ ಸಹ ಇಲ್ಲಿ ಮುಳುಗಿ ಸಾಯುತ್ತಿದ್ದರು.

ಜೇವರ್ಟನು ತನ್ನ ಎರಡು ಕೈಗಳಲ್ಲಿಯೂ ಗಲ್ಲವನ್ನು ಹಿಡಿದು, ಎರಡು ಮೊಣಕೈಗಳನ್ನೂ ಸೇತುವೆಯ ಗೋಡೆಯ ಮೇಲೆ ಊರಿ, ಬೆರಳುಗಳಿಂದ, ದಟ್ಟವಾದ ತನ್ನ ಮೀಸೆಯನ್ನು ಸುಮ್ಮನೆ ಸವರುತ್ತಾ, ಆಲೋಚಿಸುತ್ತ ನಿಂತನು.

ಅವನ ಸ್ಥಿತಿಯಲ್ಲಿ ಒಂದು ನವೀನ ವಿಚಾರವು, ಒಂದು ವ್ಯತ್ಯಾಸವು, ಅಥವಾ ಒಂದು ಅನರ್ಥವೇ ಉಂಟಾಗಿತ್ತು. ಜೇವರ್ಟನು ಬಹಳವಾಗಿ ಬೆದರಿ ಹೋಗಿದ್ದನು. ಅವನ ಜೀವಮಾನದಲ್ಲೆಲ್ಲ, ಅಪರಾಧಿಗಳನ್ನು ಬೆನ್ನುಹತ್ತಿ ಹಿಡಿಯುವುದೇ ಅವನ ನಿತ್ಯಕರ್ಮವಾಗಿದ್ದಿತು. ಈಗ, ಅವನು ಒಬ್ಬ ಅಪರಾಧಿಯನ್ನು ತಪ್ಪಿಸಿಕೊಂಡು ಇರುವಂತೆ ಬಿಟ್ಟನು. ಇದರಿಂದ ಅವನ ಮನಸ್ಸಾಕ್ಷಿಯು ಅವನನ್ನು ಚಿತ್ರಹಿಂಸೆಗೆ ಗುರಿಮಾಡಿದ್ದಿತು.

ಈಗ ಅವನು ಏನು ಮಾಡಬೇಕು? ಜೀನ್ ವಾಲ್ಜೀನನನ್ನು ಹಿಡಿದು ಸರಕಾರಕ್ಕೆ ಒಪ್ಪಿಸಿಬಿಡುವದೇ? ಅದು ಮಾನವ ಧರ್ಮದಿಂದ ತಪ್ಪಿತವಾಗುವುದು; ಏತಕ್ಕೆಂದರೆ, ಅದೇ ದಿನವೇ, ಜೀನ್ ವಾಲ್ಜೀನನು ತನ್ನ ಪ್ರಾಣವನ್ನು ಉಳಿಸಿದ್ದನು. ಜೀನ್ ವಾಲ್ಜೀನ

ನನ್ನು ಸ್ವತಂತ್ರನನ್ನಾಗಿ ಬಿಟ್ಟಿರುವುದೇ? ಅದು ನ್ಯಾಯಶಾಸ್ತ್ರ ರೀತಿಯಿಂದ ತಪ್ಪಾಗುವುದು.

ಜೇವರ್ಟನು ಕೆಲವು ನಿಮಿಷಗಳ ಕಾಲ ಆ ಅಂಧಕಾರಮಯವಾದ ಕಮರಿಯನ್ನು ಗುರಿಯಿಟ್ಟು ನೋಡುತ್ತ, ನಿಶ್ಚೇಷ್ಟಿತನಾಗಿ ನಿಂತುಬಿಟ್ಟನು. ಆದರೆ ಈ ಮನಸ್ಸಿನ ಭಾವಗಳ ಬಡಿದಾಟವನ್ನು ಸಹಿಸಲು ಅಸಾಧ್ಯವಾಯಿತು. ತಟ್ಟನೆ ಅವನು ತನ್ನ ಟೋಪಿಯನ್ನು ತೆಗೆದು ಆ ಗೋಡೆಯ ಅಂಚಿನಲ್ಲಿಟ್ಟನು. ಒಂದು ನಿಮಿಷದ ತರುವಾಯ ಎತ್ತರವಾದ ಕಪ್ಪನೆಯ ವ್ಯಕ್ತಿಯೊಂದು ಸೇತುವೆಯ ಗೋಡೆಯ ಮೇಲೆ ನಿಂತು ಸೇನ್ ನದಿಯ ಕಡೆಗೆ ಬಾಗಿ ನೆಗೆದು ನೆಟ್ಟಗೆ ಆ ಅಂಧಕಾರದೊಳಕ್ಕೆ ಬಿದ್ದುಬಿಟ್ಟಿತು. ನೀರು ಕಲಕಿ, ಫಳ್ ಎಂದು ಶಬ್ದವಾಯಿತು. ನೀರಿನಲ್ಲಿ ಮಾಯವಾದ ಆ ಆಕೃತಿಯು ಜಲತರಂಗಗಳಲ್ಲಿ ಅದಿರುತ್ತಿರುವಾಗ ಅದರ ಛಾಯೆ ಮಾತ್ರವೇ ಗೋಚರವಾಯಿತು.

---

ಅನೇಕ ದಿನಗಳವರೆಗೆ ಮೇರಿಯುಸ್ಸನು ಬದುಕಿದವನೂ ಅಲ್ಲ, ಸತ್ತವನೂ ಅಲ್ಲದೆ ; ಹೀಗೆ ಜೀವಚ್ಛವವಾಗಿ ಬಿದ್ದಿದ್ದನು. ಅವನಿಗೆ ಜ್ವರವು ಬಂದು ಬಹು ದಿನಗಳವರೆಗೆ ಸನ್ನಿ ಮುಚ್ಚಿಕೊಂಡು ಕಳವಳವು ಹುಟ್ಟಿತ್ತು. ರಾತ್ರಿಯಲ್ಲೆಲ್ಲ ಕೋಸೆಟ್ಟಳ ಪಾರಾಯಣವೇ ಆಗಿತ್ತು.

ಪ್ರತಿ ನಿತ್ಯವೂ, ಕೆಲವು ವೇಳೆ ದಿನಕ್ಕೆ ಎರಡಾವೃತ್ತಿಯೂ, ಅಂದವಾಗಿ ಉಡುಪನ್ನು ಧರಿಸಿದ್ದ, ಬಿಳಿಯ ಕೂದಲಿನ ದೊಡ್ಡ ಮನುಷ್ಯನೊಬ್ಬನು ಬಂದು ಇವನ ಸ್ಥಿತಿಯನ್ನು ಕುರಿತು ಬಾಗಿಲು ಕಾಯುವವನನ್ನು ವಿಚಾರಿಸಿ ತಿಳಿದುಕೊಂಡು ಹೋಗುತ್ತಿದ್ದುದಲ್ಲದೆ, ಗಾಯಗಳಿಗೆ ಔಷಧ ಹಾಕಿ ಕಟ್ಟಲು ಉಪಯೋಗಿಸುವುದಕ್ಕಾಗಿ, ಹತ್ತಿಯ ನಯವಾದ ಬಟ್ಟೆಯ ಕಟ್ಟನ್ನು ಕೊಟ್ಟು ಹೋಗುತ್ತಿದ್ದನು.

ಮೇರಿಯುಸ್ಸನ ತಾತ, ಜಿಲ್ಲೆನಾರ್ಮಂಡನ ಮನಸ್ಸಿನಲ್ಲಿ, ಮೊದಲು ಬಹು ಚಿಂತೆ ಹುಟ್ಟಿದ್ದುದು, ಬರಬರುತ್ತ ಸಂತೋಷವುದಯಿಸಿತು. ಮೇರಿಯುಸ್ಸನಿಗೆ ಪ್ರಾಣಭಯವು ತಪ್ಪಿತೆಂದು ವೈದ್ಯನು ಹೇಳಿದಾಗ ಅವನಿಗೆ ಸಂತೋಷದಿಂದ ಹುಚ್ಚು ಹಿಡಿದಂತಾಯಿತು. ಆಗ ಅವನು ಬಾಗಿಲು ಕಾಯುವವನಿಗೆ ಮೂರು ಲೂಯಿಗಳನ್ನು ಬಹುಮಾನವಾಗಿ ಕೊಟ್ಟನು.

ಅವನು ಪ್ರತಿ ಕ್ಷಣದಲ್ಲಿಯೂ, 'ಇನ್ನೇನೂ ಪ್ರಾಣಭಯವಿಲ್ಲವಷ್ಟೆ? ಇದೆಯೋ?' ಎಂದು ವೈದ್ಯನನ್ನು ಕೇಳುತ್ತಿದ್ದನು. ಈಗ ಮೇರಿಯುಸ್ಸನನ್ನು ಕಂಡರೆ ಅವನಿಗೆ ಮುತ್ತಜ್ಜಿಗಿದ್ದಷ್ಟು ಪ್ರೇಮ. ಊಟಮಾಡುವಾಗಲೂ ಅವನ ಹಂಬಲೇ. ತಾನು ಯಾರೆಂಬುದನ್ನೇ ಮರೆತನು. ಮೇರಿಯುಸ್ಸನೇ ಮನೆಗೆ ಯಜಮಾನನಾದನು; ತಾನು ಮೊಮ್ಮಗನಿಗೆ ಮೊಮ್ಮಗನಾದನು.

ಗಾಯಗಳಿಗೆ ಅವರು ಔಷಧವನ್ನು ಹಾಕಿ ಕಟ್ಟಿ ತನ್ನನ್ನು

ಉಪಚರಿಸುತ್ತಿದ್ದಾಗ ಮೇರಿಯುಸ್ಸನ ಮನಸ್ಸು ಮಾತ್ರ ಕೋಸೆಟ್ಟೆಳಲ್ಲಿಯೇ ಲೀನವಾಗಿರುತ್ತಿತ್ತು.

ಅವನಿಗೆ ಜ್ವರವೂ ಸನ್ನಿಯೂ ನಿಂತಮೇಲೆ ಕೋಸೆಟ್ಟಳ ಹೆಸರು ಹೇಳುವುದನ್ನು ಬಿಟ್ಟನು. ಇದರಿಂದ ಅವನಿಗೆ ಕೋಸೆಟ್ಟಳ ಚಿಂತೆ ಅಡಗಿತೆಂದು ಅವರು ಊಹಿಸುವಂತಾಯಿತು. ಆದರೆ ಅವನು ಮನಸ್ಸನ್ನು ಶಾಂತಸ್ಥಿತಿಗೆ ತಂದುಕೊಂಡಿದ್ದನು.

ತನ್ನ ಪ್ರಾಣವನ್ನು ಉಳಿಸಿದವರು ಯಾರೆಂಬುದಾಗಲಿ, ಹೇಗೆ ಉಳಿಸಿದರೆಂಬುದಾಗಲಿ ಅವನಿಗೆ ಗೊತ್ತಿರಲಿಲ್ಲ. ಅಲ್ಲದೆ, ಅವನ ಸುತ್ತುಮುತ್ತಲಿದ್ದವರಿಗೂ ಸಹ ಈ ವಿಚಾರವೇ ತಿಳಿಯದು. ಅವನನ್ನು ರಾತ್ರಿಯ ಕಾಲದಲ್ಲಿ ಯಾರೋ ಬಂಡಿಯಲ್ಲಿ ಹಾಕಿಕೊಂಡು ರೂ ಡೆಸ್ ಫೈಲ್ಸ್ ಡ್ಯೂ ಕಲ್ವೇರ್ ಬೀದಿಗೆ ತಂದುಬಿಟ್ಟರೆಂದು ಮಾತ್ರವೇ ಅವರು ಅವನಿಗೆ ಹೇಳುತ್ತಿದ್ದರು.

ಅನಂತರ, ಮೇರಿಯುಸ್ಸನಿಗೆ ಸ್ವಲ್ಪ ಗುಣತೋರಿ ಶಕ್ತಿ ಕೂಡಿದಮೇಲೆ, ಒಂದು ದಿನ, ಅಂದವಾಗಿ ಉಡುಪನ್ನು ಧರಿಸಿದ್ದ ಬಿಳಿಯ ಕೂದಲಿನ ಆ ದೊಡ್ಡಮನುಷ್ಯನು ಬಂದನು. ಈ ಸಲಮಾತ್ರ ಅವನು ಒಂಟಿಯಾಗಿ ಬರಲಿಲ್ಲ. ಆದಕಾರಣ ಈಗ ಕೋಸೆಟ್ಟಳಿಗೂ ಮೇರಿಯುಸ್ಸನಿಗೂ ಪರಸ್ಪರ ಭೇಟಿಯಾಗಲು ಅವಕಾಶವಾಯಿತು.

ಕೋಸೆಟ್ಟಳು ಒಳಗೆ ಬಂದೊಡನೆ, ಬಾಸ್ಕ್ ಮತ್ತು ನಿಕೋಲೆಟ್ ಮೊದಲಾಗಿ ಸಂಸಾರದ ಜನರೆಲ್ಲರೂ ಮೇರಿಯುಸ್ಸನ ಕೊಠಡಿಯೊಳಕ್ಕೆ ಬಂದು ಸೇರಿದರು.

ಕೋಸೆಟ್ಟಳು ಬಾಗಿಲಿಗೆ ಬಂದಾಗ ಏನೋ ಮಂಕುಮುಚ್ಚಿಕೊಂಡಂತೆ ಇದ್ದಳು.

ಮೇರಿಯುಸ್ಸನ ತಾತನು ಆಗ ಸೀನುವಷ್ಟರಲ್ಲಿದ್ದನು, ಕರವಸ್ತ್ರದಿಂದ ಮೂಗನ್ನು ಹಿಡಿದು, ಸ್ವಲ್ಪ ಹಾಗೆಯೇ ನಿಂತು, ವಸ್ತ್ರದ ಮೇಲಿನಿಂದಲೇ ಕೋಸೆಟ್ಟಳನ್ನು ನೋಡಿ, 'ಆಹಾ! ಎಂತಹ ದೇವಕನ್ಯೆ!' ಎಂದು ಹೇಳಿ ಗಟ್ಟಿಯಾಗಿ ಮೂಗನ್ನು ಸೀತನು.

ಕೂದಲು ಬೆಳ್ಳಗಾಗಿದ್ದ, ಮರ್ಮಭೇದಕವಾದ ಗಂಭೀರದ ಮುಗುಳ್ನಗೆಯಿಂದ ಕೂಡಿದ ಆ ಮನುಷ್ಯನೂ ಕೋಸೆಟ್ಟಳ ಹಿಂದೆ ಒಳಹೊಕ್ಕನು.

ಇವನೇ ಜೀನ್ ವಾಲ್ಜೀನನು. ಬಾಗಿಲುಕಾಯುವವನು ಹಿಂದೆ ಹೇಳಿದ್ದಂತೆ, ಇವನು ಹೊಸದಾದ ಕಪ್ಪುಬಣ್ಣದ ಉಡುಪುಗಳನ್ನೂ ಬಿಳಿಯ ಕೊರಳುಪಟ್ಟಿಯನ್ನೂ ಅಂದವಾಗಿ ಧರಿಸಿಕೊಂಡು ಬಂದಿದ್ದನು.

ಜೂನ್ ೭ನೆಯ ತಾರೀಖಿನ ರಾತ್ರಿ ಹರಕುಬಟ್ಟೆಗಳನ್ನು ಧರಿಸಿ, ಮೈಯೆಲ್ಲ ಕೊಚ್ಚೆಯಿಂದ ತುಂಬಿ, ಭಯಂಕರನಾಗಿಯೂ, ಬಡವಾಗಿಯೂ, ಮುಖವೆಲ್ಲವೂ ರಕ್ತಮಯವಾಗಿಯೂ, ಮೂರ್ಛೆ ಹೋಗಿದ್ದ ಮೇರಿಯಸ್ಸನನ್ನು ಎತ್ತಿಕೊಂಡು ಬಾಗಿಲಿಗೆ ಬಂದ ಆ ಭೀಕರಸ್ವರೂಪನಾದ ಹೆಣಹೊರುವ ಮನುಷ್ಯನನ್ನು ನೋಡಿದ್ದ ಆ ಬಾಗಿಲುಕಾಯುವವನು, ಈಗ ಬಂದ ಜೀನ್ ವಾಲ್ಜೀನನನ್ನು ಅವನ ನಿಜ ಸ್ವರೂಪದಲ್ಲಿ ನೋಡಿ, ಗುರುತುಹಿಡಿಯುವುದೆಂದರೆ ಸಾಧ್ಯವೇ ! ಆ ರೂಪಕ್ಕೂ ಈ ರೂಪಕ್ಕೂ ಎಷ್ಟೋ ಅಂತರವಿತ್ತು. ಆದರೂ ಅವನ ಮನಸ್ಸಿನಲ್ಲಿ ಸ್ವಲ್ಪ ಸಂದೇಹವೇ ಹುಟ್ಟಿತು. ಫಾಚೆಲ್‌ವೆಂಟ್ ಎಂದು ಹೆಸರಿಟ್ಟುಕೊಂಡಿದ್ದ ಇವನು ಕೋಸೆಟ್ಟಳೊಡನೆ ಬಂದಾಗ ಆ ಬಾಗಿಲಿನ ಆಳು ತನ್ನ ಹೆಂಡತಿಯೊಡನೆ ಗುಟ್ಟಾಗಿ, 'ನಾನು ಈ ಮುಖವನ್ನು ಎಲ್ಲಿಯೋ ನೋಡಿರುವಂತೆ ನನ್ನ ಮನಸ್ಸಿಗೆ ತೋರುತ್ತಿರುವುದಲ್ಲಾ ! ಕಾರಣವೇನು ?' ಎಂದು ಹೇಳಲೇ ಬೇಕಾಯಿತು.

ಮಾನ್‌ಸಿಯುರ್ ಫಾಚೆಲ್‌ವೆಂಟನು ಮೇರಿಯಸ್ಸನ ಕೊಠಡಿಯಲ್ಲಿ, ಬಾಗಿಲಿನ ಬಳಿಯಲ್ಲಿ ದೂರವಾಗಿ ನಿಂತನು. ಅವನ ಕಂಕುಳಲ್ಲಿ ಯಾವುದೋ ಪುಸ್ತಕವನ್ನು ಕಾಗದದಲ್ಲಿ ಸುತ್ತಿದಂತೆ ಇದ್ದ ಒಂದು ಕಟ್ಟು ಇತ್ತು. ಅದರ ಮೇಲಿನ ಕಾಗದವು ಹಸುರು ಬಣ್ಣವಾಗಿಯೂ ಮಣ್ಣಾಗಿ ಬೂಜು ಹಿಡಿದಂತೆಯೂ ಇತ್ತು.

ಮಾನ್‌ಸಿಯುರ್ ಜಿಲ್ಲೆನಾರ್ಮಂಡನು, ಇವನನ್ನು ಕುರಿತು,

'ಮಾನ್‌ಸಿಯುುರ್ ಫಾಚೆಲ್‌ವೆಂಟ್, ನನ್ನ ಮೊಮ್ಮಗ ಮಾನ್‌ಸಿಯುುರ್ ಬ್ಯಾರನ್ ಮೇರಿಯಸ್ ಪಾಂಟ್‌ಮರ‍್ಸಿಗೆ ಈ ಕನ್ಯಾಮಣಿಯನ್ನು ಪಾಣಿಗ್ರಹಣಮಾಡಿಕೊಡಬೇಕೆಂದು ವಿನಯದಿಂದ ಕೇಳಿಕೊಳ್ಳುವೆನು,' ಎಂದನು.

ಮಾನ್‌ಸಿಯುುರ್ ಫಾಚೆಲ್‌ವೆಂಟನು ತಲೆಬಾಗಿ ನಮಸ್ಕರಿಸಿದನು.

ಜಿಲ್ಲೆನಾರ್ಮಂಡನು, 'ಒಪ್ಪಿಗೆಯಾಯಿತು,' ಎಂದು, ಮೇರಿಯುಸ್ಸನನ್ನೂ ಕೋಸೆಟ್ಟಳನ್ನೂ ನೋಡಿ, ಕೈಗಳನ್ನು ನೀಡಿ ಆಶೀರ್ವದಿಸಿ, 'ಒಬ್ಬರನ್ನೊಬ್ಬರು ವರಿಸಲು ಅನುಜ್ಞೆ ಕೊಟ್ಟೆನು,' ಎಂದು ಆನಂದಪರವಶನಾಗಿ ಕೂಗಿ, ಒಂದು ಕ್ಷಣ ಕಾಲ ಸುಮ್ಮನಿದ್ದು, ಹೀಗೆಂದನು :

'ಈ ಮುದ್ದು ಕನ್ಯಾಮಣಿಯು ಪರಮ ಸೌಂದರ್ಯವತಿಯು. ಈ ಕೋಸೆಟ್ಟಳು, ದೈವ ಸೃಷ್ಟಿಯಲ್ಲಿ ಅತ್ಯುತ್ತಮಳಾದ ವಧೂಮಣಿಯು. ಚಿಕ್ಕ ಕನ್ಯೆಯಾದರೂ ಮುಂದೆ ಘನತೆಗೇರುವ ಸ್ತ್ರೀಯು. ರಾಜಪುತ್ರಿಯಂತೆ ಹುಟ್ಟಿರುವಳಾದರೂ ಒಬ್ಬ ಸಾಮಾನ್ಯ ಪ್ರಭುವಿನ ಪತ್ನಿ (a baroness) ಯಾಗಲೊಪ್ಪಿದಳು,' ಎಂದು ಹೇಳಿ, ಅವರಿಬ್ಬರನ್ನೂ ನೋಡಿ, 'ಮಕ್ಕಳಿರಾ! ನೀವು ಒಬ್ಬರನ್ನೊಬ್ಬರು ನೋಡಿ, ಪರಸ್ಪರ ತಕ್ಕವರೆಂದು ಮನಸ್ಸಿನಲ್ಲಿ ಒಪ್ಪಿ ವರಿಸಿ, ಪರಸ್ಪರ ಪ್ರೇಮಪರವಶರಾಗಿರಿ. ಪ್ರೇಮವೆಂಬುದು ಒಂದು ವೇಳೆ ಜನರ ಅವಿವೇಕ ಮನೋಭಾವನೇ ಆದರೂ ಅದು ಭಗವಂತನ ಸುವಿವೇಕ ಸೃಷ್ಟಿಯು. ಅದರಿಂದ ಇಬ್ಬರೂ ಸತಿಪತಿಗಳೆನಿಸಿ ಪರಸ್ಪರ ಭೂಷಣಗಳಾಗಿರಿ,' ಎಂದನು. ಅನಂತರ, ಸ್ವಲ್ಪ ಚಿಂತಿಸಿ, 'ಅಯ್ಯೋ! ಎಂತಹ ದುರದೃಷ್ಟ! ನನಗೀಗ ಒಂದು ಆಲೋಚನೆಯು ಹುಟ್ಟಿತು. ನನಗಿರತಕ್ಕ ಆಸ್ತಿಯಲ್ಲಿ ಅರ್ಧಕ್ಕಿಂತಲೂ ಹೆಚ್ಚು ಭಾಗವು ನನಗೆ ವರ್ಷಾಶನವಾಗಿ ಬರತಕ್ಕ ಹಣವು. ನಾನು ಜೀವಿಸಿರುವವರೆಗೂ ಎಲ್ಲವೂ ಸರಿಯಾಗಿರುವುದು. ನಾನು ಸತ್ತನಂತರ, ಎಂದರೆ ಇಂದಿನಿಂದ ಇಪ್ಪತ್ತು

ವರ್ಷಗಳವರೆಗೆ, ಅಯ್ಯೋ! ಮಕ್ಕಳಿರಾ, ನಿಮಗೆ ಒಂದು ಕಾಸಿನ ಆಸ್ತಿಯೂ ಇರುವುದಿಲ್ಲವಲ್ಲಾ! ಪ್ರಭುಪತ್ನಿಯಾಗುವ ತಾಯಿ, ಕಷ್ಟ ಕೆಲಸವನ್ನರಿಯದೆ ಸುಖದಿಂದಿದ್ದವಳು ನೀನು ಸಂಸಾರ ಪಿಶಾಚದೊಡನೆ ಎಷ್ಟು ಹೆಣಗಬೇಕಾಗುವುದೋ!'

ಹೀಗೆಂದ ಒಡನೆಯೇ 'ಯುಫ್ರೈ ಫಾಚೆಲಾವೆಂಟಳಿಗೆ ಆರು ಲಕ್ಷ ಫ್ರಾಂಕುಗಳ ಆಸ್ತಿಯಿರುವುದು,' ಎಂದ ಗಂಭೀರವಾದ ಶಾಂತ ಧ್ವನಿಯು ಕೇಳಿಸಿತು. ಹೀಗೆಂದವನು ಜೀನ್ ವಾಲ್ಜೀನನು. ಈವರೆಗೂ ಅವನು ಒಂದು ಮಾತನ್ನೂ ಆಡಿರಲಿಲ್ಲ. ಅವನು ಅಲ್ಲಿದ್ದನೆಂಬುದೂ ಸಹ ಅಲ್ಲಿ ಯಾರಿಗೂ ಜ್ಞಾಪಕವೇ ಇದ್ದಂತೆ ಕಾಣಲಿಲ್ಲ. ಆನಂದಮಗ್ನರಾಗಿದ್ದ ಇವರೆಲ್ಲರ ಹಿಂದೆ, ಅವನು ಅಲುಗದೆ ನಿಂತಿದ್ದನು.

ತಾತನು ಬೆಚ್ಚಿ, 'ಸದ್ಯಕ್ಕೆ ಈ ಕನ್ಯಾಮಣಿ, ಮೋಡಮಾಯಿಸೆಲ್ ಯುಫ್ರೈಳ ಸ್ಥಿತಿಯು ಎಂತಹುದು?' ಎಂದು ಕೇಳಿದನು.

ಅದಕ್ಕೆ ಕೋಸೆಟ್ಟಳು, 'ಅವಳೇ ನಾನು,' ಎನ್ನಲು, ಜಿಲ್ಲೆನಾರ್ಮಂಡನು, 'ಏನು? ನಿನ್ನ ಬಳಿಯಲ್ಲಿ ಆರು ಲಕ್ಷ ಫ್ರಾಂಕುಗಳಿವೆಯೇ?' ಎಂದು ಪ್ರಶ್ನೆಮಾಡಿದನು.

ಅದಕ್ಕೆ ಜೀನ್ ವಾಲ್ಜೀನನು, 'ಸುಮಾರು ಹದಿನಾಲ್ಕು ಹದಿನೈದು ಸಾವಿರ ಫ್ರಾಂಕುಗಳು ಕಡಿಮೆಯಾಗಿರಬಹುದು,' ಎಂದು ಹೇಳಿ ಪುಸ್ತಕದಂತೆ ಕಾಣುತ್ತಿದ್ದ ಆ ಕಟ್ಟನ್ನು ತೆಗೆದು ಮೇಜಿನ ಮೇಲೆ ಇಟ್ಟು, ಬಿಚ್ಚಿದನು. ಅದು ಬ್ಯಾಂಕಿನ ಹಣದ ನೋಟುಗಳ ಕಟ್ಟೆಂಬುದು ಸ್ಪಷ್ಟವಾಯಿತು. ನೋಟುಗಳನ್ನು ನೋಡಿ ಎಣಿಸಿದರು. ಅದರಲ್ಲಿ ಒಂದೊಂದೂ ಒಂದು ಸಾವಿರ ಫ್ರಾಂಕುಗಳ ಬೆಲೆಯುಳ್ಳ ಐದುನೂರು ನೋಟುಗಳೂ, ಮತ್ತು ಪ್ರತಿಯೊಂದೂ ಐದುನೂರು ಫ್ರಾಂಕುಗಳ ಬೆಲೆಯುಳ್ಳ ಒಂದುನೂರ ಅರವತ್ತೆಂಟು ನೋಟುಗಳೂ ಇದ್ದುವು. ಅಂತೂ ಒಟ್ಟಿನಲ್ಲಿ ಐದು ಲಕ್ಷದ ಎಂಭತ್ತನಾಲ್ಕು ಸಾವಿರ ಫ್ರಾಂಕುಗಳಿದ್ದವು.

ಜಿಲ್ಲೆನಾರ್ಮಂಡನು, 'ಇದು ಒಳ್ಳೆಯ ಸೊಗಸಾದ

ಪುಸ್ತಕ,' ಎಂದನು. ಮೇರಿಯಸ್ಸನೂ ಕೋಸೆಟ್ಟಳೂ ಈ ಕಾಲ ದಲ್ಲಿ ಒಬ್ಬರನ್ನೊಬ್ಬರು ನೋಡಿ ಆನಂದಪಡುತ್ತಿದ್ದರೇ ಹೊರತು, ಈ ಹಣದ ವಿಚಾರವು ಅವರ ಕಿವಿಗೇ ಬೀಳಲಿಲ್ಲ.

ಆರು ಲಕ್ಷದ ಮೂವತ್ತು ಸಾವಿರ ಫ್ರಾಂಕುಗಳ ಬೆಲೆಯ ಬ್ಯಾಂಕು ನೋಟುಗಳ ಕಟ್ಟು, ಗಾತ್ರದಲ್ಲಿ ಚಿಕ್ಕದಾದುದರಿಂದ ಅದು ಒಂದು ಪೆಟ್ಟಿಗೆಯಲ್ಲಿ ಹಿಡಿಸಿತ್ತು. ಆ ಪೆಟ್ಟಿಗೆಗೆ ತೇವವು ತಗುಲದ ಹಾಗೆ ಅದನ್ನು ಜೀನ್ ವಾಲ್ಜೀನನು ಒಂದು ಓಕ್ ಮರದ ಪೆಟ್ಟಿಗೆಯಲ್ಲಿ ಚೆಸ್ಟ್‌ನಟ್ ಮರದ ಹೊಟ್ಟನ್ನು ಹಾಕಿ, ಅದರೊಳಗೆ ಇಟ್ಟಿದ್ದನು. ಇದೇ ಪೆಟ್ಟಿಗೆಯಲ್ಲಿಯೇ ತನ್ನ ಮತ್ತೊಂದು ನಿಧಿಯೆಂದು ಅವನು ಭಾವಿಸಿದ್ದ ಪಾದ್ರಿಯು ಕೊಟ್ಟ ಮೇಣದಬತ್ತಿಯ ಕೊಳವೆಯನ್ನೂ ಇಟ್ಟಿದ್ದನು. ಇದಾದ ಮೇಲೆ ಜೀನ್ ವಾಲ್ಜೀನನಿಗೆ ಹಣವು ಬೇಕಾದಾಗಲೆಲ್ಲ ಅದನ್ನು ತರುವುದಕ್ಕಾಗಿ ಬ್ಲೇರು ಪಟ್ಟಣದ ಅರಣ್ಯಕ್ಕೆ ಹೋಗಿ ಬರುತ್ತಿದ್ದನು. ಇವನು ಆಗಾಗ ಮನೆಯಲ್ಲಿರದೆ ಇದ್ದುದಕ್ಕೆ ಇದೇ ಕಾರಣ. ಇವನು ಒಂದು ನೆಲವನ್ನಗೆಯುವ ಗುದ್ದಲಿಯನ್ನು ಪೊದೆಗಳ ಮಧ್ಯದಲ್ಲಿ ಗೋಪ್ಯವಾಗಿ ಇಟ್ಟಿದ್ದನು. ಈ ಗೋಪ್ಯ ಸ್ಥಳವು ಇವನಿಗಲ್ಲದೆ ಮತ್ತೆ ಯಾರಿಗೂ ಗೊತ್ತಿರಲಿಲ್ಲ. ಮೇರಿಯಸ್ಸನು ಆರೋಗ್ಯ ಹೊಂದಿದ ಮೇಲೆ, ಈ ಹಣವು ಉಪಯೋಗವಾಗುವ ಸಮಯವು ಒದಗಿತೆಂದು ತಿಳಿದು, ಅವನು ಅದನ್ನು ತರಲು ಹೋಗಿದ್ದನು.

---



ಜೀನ್ ವಾಲ್ಜೀನನು
ಹಣಬೇಕಾದಾಗ ಬ್ಲೇರ್ ಅಡವಿಗೆ ಹೋಗುತ್ತಿದ್ದುದು

ವಿವಾಹದ ಏರ್ಪಾಡುಗಳೆಲ್ಲವೂ ನಡೆದುವು. ವೈದ್ಯರೊಡನೆ ಆಲೋಚಿಸಿಲು, ಅವರು ಫೆಬ್ರವರಿ ತಿಂಗಳಲ್ಲಿ ವಿವಾಹವು ನಡೆಯ ಬಹುದೆಂದು ಹೇಳಿದರು. ಇದು ನಡೆದುದು ಡಿಸೆಂಬರ್ ತಿಂಗಳಲ್ಲಿ. ಹೀಗೆ ಕೆಲವು ವಾರಗಳು ಆನಂದದಿಂದ ಕಳೆದು ಹೋದುವು.

ವಿವಾಹದ ಪ್ರಯತ್ನಗಳನ್ನು ನಡೆಯಿಸುತ್ತ, ಲಗ್ನದ ಶುಭ ದಿನವನ್ನು ನಿರೀಕ್ಷಿಸಿಕೊಂಡಿರುವಾಗ ಮೇರಿಯಸ್ಸನು ಬಹಳ ಜಾಗರೂಕತೆಯಿಂದ ಆಲೋಚಿಸಿದುದರಲ್ಲಿ ಕೆಲವು ಕ್ಲಿಷ್ಟ ವಿಚಾರ ಗಳು ಅವನ ಮನಸ್ಸಿಗೆ ಬಂದು, ಅವನು ಬಹು ಮುಂದಿಗೆ ಕೃತಜ್ಞ ನಾಗಿರಬೇಕಾದ ಸಂದರ್ಭಗಳಿದ್ದುವೆಂದು ಕಂಡುಬಂದಿತು. ಕೆಲ ವರಿಗೆ ತನ್ನ ತಂದೆಯ ನಿಮಿತ್ತವಾಗಿಯೂ ಇನ್ನೂ ಕೆಲವರಿಗೆ ತನ್ನ ನಿಮಿತ್ತವಾಗಿಯೂ ಅವನು ಋಣಿಯಾಗಿದ್ದನು. ಥೆನಾರ್ಡಿಯರ ನೊಬ್ಬನು, ತನ್ನನ್ನು (ಮೇರಿಯಸ್ಸನನ್ನು) ಜಿಲ್ಲೆನಾರ್ಮಂಡನ ಮನೆಗೆ ತಲಪಿಸಿದ ಅಜ್ಞಾತ ಪುರುಷನೊಬ್ಬನು—ಇವರಿಬ್ಬರನ್ನೂ ಕಂಡುಹಿಡಿಯಲೇಬೇಕೆಂದು ಅವನು ಹಠಹಿಡಿದು ಪ್ರಯತ್ನಿಸಿದನು. ಇವರನ್ನು ಕಂಡು ತನ್ನ ಕರ್ತವ್ಯದಂತೆ ಅವರ ಋಣಗಳಿಂದ ತಾನು ಮುಕ್ತನಾಗದೆ ಇದ್ದರೆ ಮುಂದೆ ಪ್ರಖ್ಯಾತನಾಗಿ ಬದು ಕುವ ಕಾಲಕ್ಕೆ, ತನ್ನ ಜೀವಿತಕ್ಕೆ ಕಳಂಕವುಂಟಾದೀತೆಂಬ ಭಯ ದಿಂದ, ಅವರು ದೊರೆಯುವವರೆಗೂ ಮದುವೆಯನ್ನು ಒಲ್ಲದೆ ಸುಖಸಂತೋಷಗಳನ್ನೂ ಗಮನಿಸದೆ, ಅವರ ಸ್ಮರಣೆಯಲ್ಲಿಯೇ ಇದ್ದನು.

ಮೇರಿಯಸ್ಸನು ಕಳುಹಿಸಿದ್ದ ಅನೇಕ ಮಂದಿಯಲ್ಲಿ ಒಬ್ಬ ರಾದರೂ ಥೆನಾರ್ಡಿಯರನ ಸಮಾಚಾರವನ್ನು ತಿಳಿದುಬರಲಾರದೆ ಹೋದರು. ಇದರಿಂದ ಆ ಪ್ರಯತ್ನವು ಅಸಾಧ್ಯವಾಗಿ ಕಂಡಿತು. ಮೇರಿಯಸ್ಸನ ಪ್ರಾಣವನ್ನುಳಿಸಿದವನ ವಿಷಯದಲ್ಲಾದರೋ,

ಆರಂಭದ ಪ್ರಯತ್ನಗಳು ಸ್ವಲ್ಪ ಫಲಕಾರಿಯಾಗಿ ಕಂಡು, ಮುಂದೆ ಏನೂ ತಿಳಿಯದೆ ಹೋಯಿತು.

ಮೇರಿಯಸ್ಸನಿಗೆ ಹಿಂದಣ ವಿಷಯಗಳು ಯಾವುವೂ ಜ್ಞಾಪಕವಿಲ್ಲವೆಂದು ಹೇಳಿದೆವಷ್ಟೆ. ಅವನು ಜಿಲ್ಲೆನಾರ್ಮಂಡನ ಮನೆಗೆ ಬಂದ ಮೇಲೆಯೇ ಅವನಿಗೆ ಜ್ಞಾನವು ಬಂದುದು. ಈ ವಿಚಿತ್ರ ಗೂಢವೃತ್ತಾಂತಗಳಲ್ಲಿ ಒಂದೂ ಅವನಿಗೆ ಗೋಚರ ವಿರಲಿಲ್ಲ.

ಮೇರಿಯಸ್ಸನು ತನ್ನ ತಾತನ ಮನೆಗೆ ತರಲ್ಪಟ್ಟಾಗ ಧರಿಸಿದ್ದ ರಕ್ತಮಯವಾದ ವಸ್ತ್ರಗಳ ಮೂಲಕ ತಾನು ಹುಡುಕುತ್ತಿರುವ ಮನುಷ್ಯರನ್ನು ಕಂಡು ಹಿಡಿಯಲು ಸಾಧ್ಯವಾಗಬಹುದೆಂಬ ಭರವಸದಿಂದ, ಅವನು ಅವುಗಳನ್ನು ಜೋಪಾನವಾಗಿ ಇಟ್ಟಿದ್ದನು. ಆಗಿನ ಉಡುಪುಗಳನ್ನು ಪರೀಕ್ಷಿಸಿ ನೋಡಿದುದರಲ್ಲಿ, ಒಂದರ ಅಂಚನ್ನು ವಿಚಿತ್ರವಾಗಿ ಕತ್ತರಿಸಿದ್ದುದು ಕಂಡಿತು. ಅಲ್ಲದೆ ಹರಿದ ತುಂಡು ಇರಲಿಲ್ಲ.

ಮದುವೆಗೆ ಸ್ವಲ್ಪ ದಿನಗಳ ಮೊದಲು ಜೀನ್ ವಾಲ್ಜೀನನ ಬಲಗೈಯ ಹೆಬ್ಬೆರಳಿಗೆ ದೆಬ್ಬೆ ತಗುಲಿ ಸ್ವಲ್ಪ ಜಜ್ಜಿತಂತೆ. ಅದು ಅಷ್ಟು ಪ್ರಬಲವಾದ ಗಾಯವಲ್ಲದಿದ್ದರೂ, ಅದಕ್ಕೆ ಔಷಧ ಹಾಕಿ ಕಟ್ಟುವುದಕ್ಕಾಗಲಿ, ಕಡೆಗೆ ಅದನ್ನು ನೋಡುವುದಕ್ಕಾಗಲಿ ಅವನು ಯಾರಿಗೂ, ಎಂದರೆ ಕೋಸೆಟ್ಟಳಿಗೂ ಸಹ, ಅವಕಾಶ ಕೊಡಲಿಲ್ಲ. ಆದರೂ ಅವನು ಕೈಗೆ ಕಟ್ಟನ್ನು ಕಟ್ಟಿಕೊಂಡು, ತೋಳನ್ನು ತೂಗ ಹಾಕಿಕೊಂಡಿದ್ದನು. ಈಗ ರುಜು ಹಾಕುವುದಕ್ಕೂ ಸಾಧ್ಯ ವಿಲ್ಲವಾಯಿತು. ಜಿಲ್ಲೆನಾರ್ಮಂಡನೇ ಇವನಿಗೆ ಪ್ರತಿಯಾಗಿ ಕೋಸೆಟ್ಟಳ ಮೇಲುವಿಚಾರಣೆಗೆ ನಿಂತನು.

ಮದುವೆಯು 'ನೆರವೇರಿದನಂತರ ರೂ ಡೆಸ್ ಫೈಲ್ಸ್ ಡ್ಯೂ ಕಲ್ವೇರ್ ಬೀದಿಯಲ್ಲಿದ್ದ ತಮ್ಮ ಮನೆಗೆ ಬಂದರು. ಹಿಂದೆ ಮರಣಾವಸ್ಥೆಯಲ್ಲಿ ತನ್ನನ್ನು ಹೊತ್ತು ತಂದ ಮಹಡಿಯ ಮೆಟ್ಟಲುಗಳ ಮೇಲೆ ಮೇರಿಯಸ್ಸನು ಕೋಸೆಟ್ಟಳೊಡಗೂಡಿ

ವಿಜಯಶಾಲಿಯಾಗಿಯೂ, ತೇಜಸ್ವಿಯಾಗಿಯೂ, ಹತ್ತಿ ಬಂದನು. ಮನೆಯ ಮುಂದೆ ಬಡಜನರ ಗುಂಪು ಸೇರಿತ್ತು. ದಂಪತಿಗಳಿಬ್ಬರೂ ಯಥಾಶಕ್ತಿಯಾಗಿ ಬಡಜನರಿಗೆ ಹಣವನ್ನು ದಾನ ಕೊಟ್ಟರು. ನೆರೆದ ಜನರೆಲ್ಲರೂ ಹೂಮಳೆಗರೆದು ಗಂಡಹೆಂಡಿರನ್ನು ಒಮ್ಮನಸ್ಸಿನಿಂದ ಸುಖಿಜೀವಿಗಳಾಗಿ ಬಾಳಿರೆಂದು ಹರಸಿದರು. ಪುಷ್ಪರೂಪ ಸಂತೋಷವು ಫಲಿಸಿತು. ದಂಪತಿಗಳು ದೇವಲೋಕ ಗಾನಲೀನರಾದಂತೆ ದಿವ್ಯಾನಂದದಲ್ಲಿದ್ದರು. ದೈವಾನುಗ್ರಹದಿಂದ ತುಂಬಿದ ಇವರ ಆತ್ಮಗಳು ಸಂತೋಷದಿಂದ ನಲಿಯುತ್ತಿದ್ದುವು. ವಿಧಿಯ ಲೀಲೆಯು, ಅವರ ಮನಸ್ಸಿಗೆ, ತಮ್ಮ ತಲೆಯಮೇಲೆ ಕಾಂತಿಯಿಂದ ಬೆಳಗುವ ನಕ್ಷತ್ರಮಂಡಲದಂತೆ ಮನೋಹರವಾಗಿತ್ತು. ಈ ಸಮಯವು ಅವರಿಗೆ ತಮ್ಮ ಮುಂದಣ ಭಾಗ್ಯ ಪ್ರಕಾಶವನ್ನು ಸೂಚಿಸುವ ಸೂರ್ಯೋದಯದಂತೆ ಇತ್ತು.

ಜೀನ್ ವಾಲ್ಜೀನನು ಹಿಂದಿರುಗಿ ಮನೆಗೆ ಬಂದು ದೀಪವನ್ನು ಹಚ್ಚಿ ಮಹಡಿಯ ಮೇಲಕ್ಕೆ ಹೋದನು. ತೂಗ ಕಟ್ಟಿದ್ದ ತೋಳಿನ ಕಟ್ಟನ್ನು ಬಿಚ್ಚಿ, ಎಂದಿನಂತೆ ಬಲಗೈಯನ್ನು ಉಪಯೋಗಿಸಲಾರಂಭಿಸಿದನು.

ತರುವಾಯ ಹಾಸುಗೆಯ ಬಳಿಗೆ ಬರುವಲ್ಲಿ, ಹಿಂದೆ ಕೋಸೆಟ್ಟಳು 'ಅಗಲಲಾಗದ ಅತಿ ವಸ್ತು' ಎಂದು ಹೆಸರಿಟ್ಟು ಅಸೂಯೆ ಪಡುತ್ತಿದ್ದ, ಆ ಚಿಕ್ಕ ಹಸಿಬೆಯ ಚೀಲದ ಮೇಲೆ ಅವನ ದೃಷ್ಟಿಯು ಬಿತ್ತು. ಇದನ್ನು ಇವನು ಹಿಂದೆ, ಅಗಲಿರುತ್ತಲೇ ಇರಲಿಲ್ಲ. ಈಗ ಬಹಳ ಉಲ್ಲಾಸದಿಂದ ಅದರ ಬಳಿಗೆ ಹೋಗಿ, ತನ್ನ ಜೇಬಿನಿಂದ ಬೀಗದಕೈಯನ್ನು ತೆಗೆದು, ಆ ಹಸಿಬೆಯನ್ನು ತೆರೆದನು.

ಹತ್ತು ವರ್ಷಗಳ ಹಿಂದೆ ಕೋಸೆಟ್ಟಳು ಮಾಂಟ್ ಫರ್ಮೆಯಿಲ್ ಎಂಬ ಊರನ್ನು ಬಿಟ್ಟು ಬಂದಾಗ ಧರಿಸಿದ್ದ ಉಡುಪುಗಳನ್ನು ಮೆಲ್ಲನೆ ಹೊರಕ್ಕೆ ತೆಗೆದನು. ಮೊದಲು ಚಿಕ್ಕ ಉಡುಪನ್ನೂ ಅನಂತರ ಕಪ್ಪು ಕೊರಳಪಟ್ಟಿಯನ್ನೂ ತರುವಾಯ, ಭಾರ

ವಾಗಿದ್ದ ಅವಳ ಜೋಡುಗಳನ್ನೂ ತೆಗೆದನು. ಕೋಸೆಟ್ಟಳ ಪಾದಗಳು ಪುಟ್ಟ ಪುಟ್ಟವಾಗಿದ್ದುದರಿಂದ, ಅವು ಈಗಲೂ ಅವಳು ಧರಿಸಬಹುದೆಂಬಂತೆ ಇದ್ದುವು. ಆಮೇಲೆ ಬಲು ದಪ್ಪವಾಗಿದ್ದ ಅವಳ ಕುಪ್ಪಸವನ್ನೂ, ಜೇಬುಗಳಿದ್ದ ಅಂಗಿಯನ್ನೂ, ಉಣ್ಣೆಯ ಕಾಲು ಚೀಲಗಳನ್ನೂ ತೆಗೆದನು. ಮುದ್ದಾದ ಪುಟ್ಟಪುಟ್ಟ ಕಾಲುಗಳ ಆಕಾರವು ಇನ್ನೂ ಇವುಗಳ ಮೇಲೆ ಅಂದವಾಗಿ ಕಾಣುತ್ತಿದ್ದುವು. ಈ ಕಾಲುಚೀಲಗಳು ಜೀನ್ ವಾಲ್ಜೀನನ ಕೈಗಳಿಗಿಂತಲೂ ಉದ್ದವಾಗಿರಲಿಲ್ಲ. ಇವೆಲ್ಲವೂ ಕಪ್ಪುಬಣ್ಣದವುಗಳಾಗಿದ್ದುವು. ಈ ಉಡುಪುಗಳೆಲ್ಲವನ್ನೂ ಹಸಿಬೆಯ ಚೀಲದಿಂದ ತೆಗೆದು ಹಾಸುಗೆಯ ಮೇಲಿಟ್ಟು, ಆಲೋಚಿಸುತ್ತ ಕುಳಿತನು.

ಹೀಗೆ ಬಹಳ ಹೊತ್ತು ತನ್ನ ಹಿಂದಣ ಕಥೆಗಳೆಲ್ಲವನ್ನೂ ಸ್ಮರಿಸುತ್ತ ಹಾಸುಗೆಯ ಪಕ್ಕದಲ್ಲಿ ಕುಳಿತಿದ್ದು, ಆ ಮಹಸೀಯನಾದ ವೃದ್ಧನು ತಟ್ಟನೆ ಹಾಸುಗೆಯ ಮೇಲೆ ಬಿದ್ದುಕೊಂಡನು. ವಯೋಧರ್ಮದಿಂದ ವೈರಾಗ್ಯ ಹುಟ್ಟಿದ್ದರೂ ಅವನಿಗೆ ಎದೆಯೊಡೆಯುವಂತಹ ದುಃಖವು ಉಕ್ಕಿಬಂತು. ಅವನ ಮುಖವು ಕೋಸೆಟ್ಟಳ ಉಡುಪುಗಳಲ್ಲಿ ಮುಚ್ಚಿಹೋಗಿದ್ದಿತು. ಮಹಡಿಯ ಮೆಟ್ಟಲಮೇಲೆ ಯಾರಾದರೂ ಆಗ ಸಂಚರಿಸುತ್ತಿದ್ದಿದ್ದರೆ ಅವರ ಕಿವಿಗೆ ಭಯಂಕರವಾಗಿ ಬಿಕ್ಕಿ ಬಿಕ್ಕಿ ಅಳುತ್ತಿದ್ದ ಶಬ್ದವೇ ಕೇಳಿಬರುತ್ತಿತ್ತು.

---

ನಾಲ್ಕನೆಯ ದಿನ ಪ್ರಾತಃಕಾಲದಲ್ಲಿ ಮೇರಿಯಸ್ಸನ ಮನೆಗೆ ಹೋಗಿ, ಅವನಲ್ಲಿ ಏಕಾಂತವಾಗಿ ಜೀನ್ ವಾಲ್ಜೀನನು ಮಾತ ನಾಡಬೇಕಾಗಿರುವುದೆಂದು ಕೇಳಿದನು. ಸಂತೋಷದಿಂದ ಅವನನ್ನು ಗೌರವಿಸಿ, ಮೇರಿಯಸ್ಸನು, 'ತಂದೆ, ನಿಮ್ಮನ್ನು ನೋಡಿ ನನಗೆ ಬಹಳ ಸಂತೋಷವಾಯಿತು! ನೀವು ನಿನ್ನೆಯ ದಿನ ಬಾರದೆ ಇದ್ದುದು ನಮ್ಮೆಲ್ಲರಿಗೂ ವ್ಯಸನಕ್ಕೆ ಕಾರಣವಾಗಿತ್ತು. ಈಗ ನಿಮ್ಮ ಕೈ ನೋವು ಹೇಗಿದೆ? ಸ್ವಲ್ಪ ಕಡಿಮೆಯಾಗಿರಬಹು ದಲ್ಲವೇ?' ಎಂದನು.

ಅದಕ್ಕೆ ಜೀನ್ ವಾಲ್ಜೀನನು, 'ಅಯ್ಯಾ, ನಾನು ನಿನ ಗೊಂದು ವಿಷಯವನ್ನು ತಿಳಿಸಬೇಕಾಗಿದೆ. ನಾನೊಬ್ಬ ಶಿಕ್ಷಿತ ನಾದ ಹಳೆಯ ಅಪರಾಧಿಯು,' ಎಂದನು.

ಮೇರಿಯಸ್ಸನು ಇದನ್ನು ಗಮನಿಸಿ ಕೇಳಲಿಲ್ಲ. ಅವನು ಏನೋ ಹೇಳಿದನಾದರೂ ಅದರ ಭಾವವೇನೆಂಬುದು ಅವನಿಗೆ ತಿಳಿಯಲೇ ಇಲ್ಲ. ಆದರೂ ಅವನಿಗೆ ಗಾಬರಿಯಾಯಿತು. ತನ್ನೊಡನೆ ಮಾತನಾಡುತ್ತಿದ್ದ ಮನುಷ್ಯನು ಮಹಾ ಕಠೋರನೂ ಭಯಂಕರನೂ ಆದ ವ್ಯಕ್ತಿಯೆಂದು ಅವನಿಗೆ ತೋರಿತು. ಅವನ ಮನಸ್ಸು ಗಾಬರಿಗೊಂಡಿದ್ದರೂ, ಮುಖವು ಮಾತ್ರ ಈವರೆಗೂ ಹೀಗೆ ಭಯದಿಂದ ಯಾವಾಗಲೂ ಕಳೆಗೆಟ್ಟಿರಲಿಲ್ಲ.

ಜೀನ್ ವಾಲ್ಜೀನನು ತನ್ನ ಬಲದೋಳಿಗೆ ಕಟ್ಟಿದ್ದ ಕೊರಳ ಪಟ್ಟಿಯನ್ನು ಬಿಚ್ಚಿ, ಕೈಗೆ ಸುತ್ತಿದ್ದ ಬಟ್ಟೆಯನ್ನು ತೆಗೆದುಹಾಕಿ, ಬರಿಯ ಹೆಬ್ಬೆರಳನ್ನು ಮೇರಿಯಸ್ಸನಿಗೆ ತೋರಿಸಿದನು.

'ನನ್ನ ಕೈಗೆ ಏನೂ ಆಗಿರಲಿಲ್ಲ. ನಿಮ್ಮ ಮದುವೆಯ ಸಮಯದಲ್ಲಿ ನಾನು ಅಲ್ಲಿ ಇಲ್ಲದಿರುವುದೇ ಉತ್ತಮವೆಂದು ಆಲೋಚಿಸಿ, ಸಾಧ್ಯವಾದ ರೀತಿಯಿಂದ ತಪ್ಪಿಸಿಕೊಂಡೆನು. ನಾನು ಸುಳ್ಳು ರುಜುವನ್ನು ಮಾಡದಿರುವುದಕ್ಕಾಗಿಯೂ

ವಿವಾಹದ ಕಾನೂನು ರದ್ದಾಗಲು ಅವಕಾಶಕೊಡದಿರುವುದಕ್ಕಾಗಿಯೂ ಮತ್ತು ನಾನು ಋಜುವಾಡದಿದ್ದರೆ ಯಾರೂ ಅನುಮಾಧಾನಪಡದೆ ನನ್ನನ್ನು ಕ್ಷಮಿಸಬೇಕೆಂತಲೂ ನನ ನನ್ನ ಕೈ ಗಾಯವಾಗಿದೆ ಎಂದು ನಟನೆಮಾಡಿದೆನು,' ಎಂದನು.

ಮೇರಿಯುಸ್ಸನು ಇದನ್ನು ಕೇಳಿ, ತೊದಲ್ನುಡಿಯಿಂದ, 'ಇದರ ಭಾವವೇನೋ ನನಗೆ ತಿಳಿಯಲಿಲ್ಲ,' ಎಂದನು.

ಅದಕ್ಕೆ ಜೀನ್ ವಾಲ್ಜೀನನು, 'ಇದರ ಭಾವವು ನಾನು ಗ್ಯಾಲಿಯುಲ್ಲಿ ಶಿಕ್ಷಿತನಾಗಿದ್ದ ಅಪರಾಧಿಯು, ಎಂದು,' ಎಂದುತ್ತರ ಕೊಟ್ಟನು.

ಮೇರಿಯುಸ್ಸನು ಇದನ್ನು ಕೇಳಿ ಭಯದಿಂದ, 'ಏನದು? ನಿಮ್ಮ ಮಾತಿನಿಂದ ನನಗೆ ಹುಚ್ಚು ಹಿಡಿಸುತ್ತಿರುವಿರಲ್ಲಾ!' ಎಂದನು.

ಅದಕ್ಕೆ ಜೀನ್ ವಾಲ್ಜೀನನು, 'ನಾನು ಕಳ್ಳತನ ಮಾಡಿ ಹತ್ತೊಂಭತ್ತು ವರ್ಷಗಳ ಕಾಲ, ಗ್ಯಾಲಿಯುಲ್ಲಿ ಶಿಕ್ಷಿತನಾಗಿದ್ದೆನು. ಮತ್ತೆ ಎರಡನೆಯ ಸಲ ಕಳ್ಳತನಮಾಡಿದ ಅಪರಾಧಕ್ಕಾಗಿ ನನಗೆ ಆಮರಣಾಂತ ಶಿಕ್ಷೆಯು ವಿಧಿಸಲ್ಪಟ್ಟಿತ್ತು. ಈಗ ನಾನು ಆಜ್ಞೋಲ್ಲಂಘನ ಮಾಡಿ ತಪ್ಪಿಸಿಕೊಂಡು ಬಂದಿದ್ದೇನೆ,' ಎಂದು ಹೇಳಿ, ಒಂದು ಕ್ಷಣಕಾಲ ಸುಮ್ಮನೆ ತರ್ಜನಿಯ ಬೆರಳನ್ನು ಹೆಬ್ಬೆಟ್ಟಿನ ಉಗುರಿನ ಮೇಲೆ ಆಡಿಸುತ್ತ, ಆಲೋಚನೆಯುಲ್ಲಿದ್ದು, ಅನಂತರ ಗಟ್ಟಿಯಾಗಿ, 'ಇನ್ನೇನು! ಎಲ್ಲವೂ ಕೊನೆಗಂಡಂತಾಯಿತು. ಇನ್ನೊಂದು ಮಾತ್ರ ಉಳಿದಿದೆ—' ಎನ್ನುವಷ್ಟರಲ್ಲಿ, ಮೇರಿಯುಸ್ಸನು, 'ಏನು?' ಅಂದನು.

ಜೀನ್ ವಾಲ್ಜೀನನು ಬಹಳವಾಗಿ ಅನುಮಾನಿಸಿ, ಮಾತನಾಡಲು ಉಸಿರಿಲ್ಲದವನಾಗಿ, ತೊದಲುತ್ತ, 'ಅಯ್ಯಾ! ಎಲ್ಲ ವಿಷಯಗಳೂ ನಿನಗೆ ಗೊತ್ತಾದುವಷ್ಟೆ! ಈಗ ನೀನು ಯಜಮಾನನಾಗಿರುವೆ. ನಾನು ಮತ್ತೆ ಕೋಸೆಟ್ಟಳನ್ನು ನೋಡಕೂಡದೆಂದು ನಿನ್ನ ಅಭಿಪ್ರಾಯವಿರುವುದೇ?' ಎಂದು ಕೇಳಿದನು.

ಆದಕ್ಕೆ ಮೇರಿಯುಸ್ಸನು, 'ಅದೇ ಉತ್ತಮ,' ಎಂದು ನಿರ್ದಾಕ್ಷಿಣ್ಯವಾಗಿ ನುಡಿದನು.

ಜೀನ್ ವಾಲ್ಜೀನನು, 'ಇನ್ನು ನಾನು ಅವಳನ್ನು ನೋಡಲೇ ಕೂಡದು!' ಎಂದು ಗೊಣಗುಟ್ಟಿಕೊಂಡು ಬಾಗಿಲ ಕಡೆಗೆ ಹೋಗಿ ಚಿಲುಕವನ್ನೆಳೆದು, ತಾನು ಹೊರಗೆ ಹೋಗುವವುಟ್ಟಿಗೆ ಕದವನ್ನು ತೆರೆದು, ಒಂದು ಕ್ಷಣಕಾಲ ಸ್ತಬ್ಧನಾಗಿ ನಿಂತು, ಮೇರಿಯುಸ್ಸನ ಕಡೆಗೆ ತಿರುಗಿದನು. ಅವನ ಮುಖವು ಕಳೆಗೆಡದಿದ್ದರೂ ಮನಸ್ಸು ಮಾತ್ರ ಕುಂದಿತ್ತು. ಕಣ್ಣಿನಲ್ಲಿ ನೀರು ಬಾರದಿದ್ದರೂ, ದೃಷ್ಟಿಯಲ್ಲಿ ದುಃಖಸೂಚಕವಾದ ಉರಿಯು ಕಾಣುತ್ತಿತ್ತು. ಅವನ ಧ್ವನಿಯು ಮತ್ತೆ ಒಂದು ವಿಚಿತ್ರವಾದ ಶಾಂತ ರೀತಿಯನ್ನು ಪಡೆಯಿತು.

ಅವನು ಮೇರಿಯುಸ್ಸನನ್ನು ನೋಡಿ, 'ಅಯ್ಯಾ, ನೀನಿಷ್ಟಪಟ್ಟರೆ, ನಾನು ಬಂದು ಅವಳನ್ನು ನೋಡುವೆನು. ನನಗೆ ಅವಳನ್ನು ನೋಡಬೇಕೆಂಬ ಹಂಬಲು ನಿಜವಾಗಿಯೂ ಬಹಳವಾಗಿರುವುದು. ಈ ಆತುರವು ನನ್ನನ್ನು ಬಾಧಿಸದಿದ್ದರೆ ನಾನು ನಿನ್ನನ್ನು ಹೀಗೆ ಬೇಡಿಕೊಳ್ಳುತ್ತಿರಲಿಲ್ಲ. ಹಾಗೆಯೇ ಹೊರಟು ಹೋಗುತ್ತಿದ್ದೆನು. ಆದರೆ, ಕೋಸೆಟ್ಟಳು ಇರುವ ಸ್ಥಳದಲ್ಲಿಯೇ ಇದ್ದು, ಅವಳನ್ನು ಆಗಾಗ ನೋಡುತ್ತಿರಬೇಕೆಂಬ ಆಸೆಯಿಂದ ನಾನು ಸತ್ಯವಾಗಿಯೂ ಎಲ್ಲವನ್ನೂ ನಿನ್ನೊಡನೆ ಹೇಳಬೇಕಾಗಿ ಬಂತು. ನಾನು ಹೇಳುವ ಭಾವವು ನಿನಗರ್ಥವಾಯಿತೇ? ನೋಡು, ಈಗ ಕಳೆದ ಒಂಭತ್ತು ವರ್ಷಗಳಿಂದಲೂ ನಾನು ಅವಳನ್ನು ನನ್ನ ಬಳಿಯಲ್ಲಿಯೇ ಇಟ್ಟುಕೊಂಡಿದ್ದೆನು. ನಾವಿಬ್ಬರೂ ಒಬ್ಬರನ್ನೊಬ್ಬರು ಅಗಲಿದುದೇ ಇಲ್ಲ. ನಾನು ಅವಳಿಗೆ ತಂದೆಯಂತೆ ಇದ್ದೆನು; ಅವಳು ನನ್ನ ಮಗುವಾಗಿದ್ದಳು. ಪಾಂಟ್‌ಮರ್ಸೀ, ನಾನು ಹೇಳುವುದು ನಿನ್ನ ಮನಸ್ಸಿಗೆ ಬರುವುದೋ ಇಲ್ಲವೋ ಕಾಣೆ. ಇಲ್ಲಿಂದ ಮುಂದಕ್ಕೆ ಅವಳನ್ನು ನೋಡದೆಯೂ, ಅವಳ ಸಂಗಡ ಮಾತನಾಡದೆಯೂ ತ್ಯಜಿಸುವುದು ಬಹಳ ಕಷ್ಟವಾಗುವುದು. ನೀನು ಅಪರಾಧವೆಂದು ತಿಳಿಯದಿದ್ದರೆ,

ನಾನು ಆಗಾಗ ಕೋಸೆಟ್ಟಳನ್ನು ನೋಡುವುದಕ್ಕೆ ಬರುವೆನು. ಆದರೆ, ಪದೇ ಪದೇ ಬರುವುದಿಲ್ಲ. ಬಹಳ ಹೊತ್ತು ಇರುವುದೂ ಇಲ್ಲ. ಕೆಳಗಣ ಅಂತಸ್ತಿನ ತಗ್ಗಾದ ಚಿಕ್ಕ ಕೋಣೆಯಲ್ಲಿ ಅವಳು ನನ್ನನ್ನು ಕಾಣುವಂತೆ ನೀನು ಏರ್ಪಡಿಸಬಹುದು. ಅಯ್ಯಾ! ಇನ್ನೂ ಕೋಸೆಟ್ಟಳನ್ನು ನೋಡಬೇಕೆಂಬ ಆಸೆಯು ನನಗೆ ನಿಜ ವಾಗಿಯೂ ಇರುವುದು. ಅದೂ, ನೀನು ಎಷ್ಟು ದಿನಗಳಿಗೊಂದಾ ವೃತ್ತಿ ಇಷ್ಟಪಟ್ಟರೆ ಅದರಂತೆ ಆಗಲಿ. ನೀನು ನನ್ನ ಸ್ಥಾನದಲ್ಲಿ ರುವೆಯೆಂದು ತಿಳಿ. ನನಗೆ ಬೇಕಾದುದು ಅಷ್ಟೆ. ಅಲ್ಲದೆ, ನಾವು ಬಹಳ ಜಾಗರೂಕರಾಗಿರಬೇಕು. ನಾನು ಬಾರದೆಯೇ ಇದ್ದರೆ ಅದರಿಂದ ಕೆಡುಕುಂಟು. ಇದೇನೋ ವಿಚಿತ್ರ ವಿಷಯವೆಂದು ಜನರು ಭಾವಿಸಲು ಅವಕಾಶವಾಗುವುದು. ಒಂದು ವೇಳೆ ನಾನು ಸಂಧ್ಯಾಕಾಲ ಕತ್ತಲಾಗುವ ಸಮಯದಲ್ಲಿ ಬರಬಲ್ಲೆನು,' ಎಂದನು.

ಅದಕ್ಕೆ ಮೇರಿಯುಸ್ಸನು, 'ನೀವು ಪ್ರತಿ ನಿತ್ಯವೂ ಸಾಯಂ ಕಾಲದಲ್ಲಿ ಬರಬಹುದು. ಕೋಸೆಟ್ಟಳು ನಿಮಗಾಗಿ ಕಾದಿರುವಳು,' ಎಂದನು.

ಜೀನ್ ವಾಲ್ಜೀನನು, 'ಅಯ್ಯಾ, ನೀನು ಬಹು ದಯಾ ಶಾಲಿಯು,' ಎಂದು ಸಂತೋಷದಿಂದ ಉತ್ತರ ಹೇಳಿದನು.

ಇಷ್ಟಾದಮೇಲೆ, ಮೇರಿಯುಸ್ಸನು ಜೀನ್ ವಾಲ್ಜೀನನಿಗೆ ಬಾಗಿ ನಮಸ್ಕರಿಸಿ, ಆ ಸುಖಿಯು ದುಃಖಿಯನ್ನು ಬಾಗಿಲವರೆಗೂ ಕರೆತಂದುಬಿಟ್ಟನು. ಇಬ್ಬರೂ ಪರಸ್ಪರ ಅಗಲಿದರು.

ಮೂರನೆಯ ದಿನ ರಾತ್ರಿ, ಜೀನ್ ವಾಲ್ಜೀನನು ಕೋಸೆಟ್ಟ ಳನ್ನು ನೋಡಲು ಬಂದನು. ಮೊದಲುಮೊದಲು ಅವನು ಪರಕೀಯ ನಂತೆ ಮರ್ಯಾದೆಯಿಂದ ದೂರ ದೂರವಾಗಿಯೇ ಇದ್ದನು. ಇನ್ನು ಮುಂದೆ ತಾನು ಕೋಸೆಟ್ಟಳನ್ನು ಮೇಡಮ್ ಎಂದು ಸಂಬೋಧಿಸು ವುದಾಗಿಯೂ, ಅವಳು ತನ್ನನ್ನು ಮಾನ್ಸಿಯೂರ್ ಜೀನ್ ಎಂದು ಕರೆಯಬೇಕೆಂತಲೂ ಅವಳಿಗೆ ಹೇಳಿದನು. ಅಲ್ಲದೆ, ಕೋಸೆಟ್ಟಳು, ತಾನೂ ಮೇರಿಯುಸ್ಸನೂ ಇದ್ದ ಕಡೆಗೇ ಬಂದು ತಮ್ಮ ಸಂಗಡವೇ

ವಾಸವಾಗಿರಬೇಕೆಂದು ಜೀನ್ ವಾಲ್ಜೀನನನ್ನು ಕರೆಯಲು ಅವನು ಅದಕ್ಕೆ ಒಪ್ಪಲಿಲ್ಲ. ಕೋಸೆಟ್ಟಳು ಏನೂ ತೋರದೆ, ದುಃಖದಿಂದ ಜೀನ್ ವಾಲ್ಜೀನನನ್ನು ಕುರಿತು ಗಟ್ಟಿಯಾಗಿ, 'ಈ ವಿಚಾರವು ನನಗೆ ಸ್ವಲ್ಪವೂ ಅರ್ಥವಾಗಲಿಲ್ಲ. ಇದೆಲ್ಲವೂ ಬುದ್ಧಿಯಿಲ್ಲದ ಮಾತು. ನಿನ್ನನ್ನು 'ಮಾನ್‌ಸಿಯುರಾ ಜೀನ್' ಎಂದು ಕರೆಯಲು ನನ್ನ ಗಂಡನ ಅಪ್ಪಣೆಯನ್ನು ಕೇಳುವೆನು. ಆತನು ಅದಕ್ಕೆ ಒಪ್ಪು ಲಾರನೆಂದು ನನಗೆ ನಂಬಿಕೆಯಿದೆ. ನೀನು ನನಗೆ ಬಹಳ ವ್ಯಥೆ ಯನ್ನುಂಟುಮಾಡುತ್ತಿರುವೆ. ನಿನಗೇನೋ ಕ್ಷಣಕ್ಕೊಂದು ವಿಧ ವಾಗಿ ಬುದ್ಧಿಯು ವ್ಯತ್ಯಾಸವಾಗಬಹುದು; ಆದರೆ ನಿನ್ನ ಮುದ್ದು ಮಗಳಾದ ಕೋಸೆಟ್ಟಳನ್ನು ನೀನು ವ್ಯಥೆಪಡಿಸಬಾರದು. ಹಾಗೆ ಮಾಡುವುದು ತಪ್ಪು. ನೀನು ಹೀಗೆ ಕಾಡಿಸುವುದು ತಕ್ಕುದಲ್ಲ. ನೀನು ಬಹಳ ಒಳ್ಳೆಯವನು,' ಎಂದು ಅತ್ತಳು.

ಜೀನ್ ವಾಲ್ಜೀನನು ಉತ್ತರವನ್ನೇ ಹೇಳಲಿಲ್ಲ.

ಕೋಸೆಟ್ಟಳು ಆತುರದಿಂದ ಅವನ ಎರಡು ಕೈಗಳನ್ನೂ ಹಿಡಿದು, ಬೇಗನೆ ತನ್ನ ಹಣೆಯ ವರೆಗೂ ಎತ್ತಿ, ತನ್ನ ಗಲ್ಲದ ಕೆಳಗಿ ನಿಂದ ಕುತ್ತಿಗೆಗೆ ಒತ್ತಿ ಹಿಡಿದುಕೊಂಡು, ಅವನಲ್ಲಿ ಅತ್ಯಂತ ಪ್ರೀತಿ ಯನ್ನು ಪ್ರಕಟಿಸಿ, 'ಅಯ್ಯೋ! ಒಳ್ಳೆಯವನಾಗಿರಪ್ಪಾ! ಒಳ್ಳೆಯವ ನಾಗಿರುವುದೆಂದರೆ, ನೀನು ನನ್ನ ತಂದೆಯಾಗಿ ಇಲ್ಲಿಯೇ ಬಂದು ಇರು; ನಮ್ಮವನಾಗಿ ಇದ್ದುಕೊಂಡು, ನಮ್ಮ ಮನೆಯಲ್ಲಿ ನಮ್ಮ ಜೊತೆಯಲ್ಲಿಯೇ ಊಟಮಾಡಬೇಕು. ತಿಂಡಿಯನ್ನು ತಿನ್ನಬೇಕು,' ಎಂದಳು.

ಅವನು ಕೈಗಳನ್ನು ಬಿಡಿಸಿಕೊಂಡು, ಅವಳನ್ನು ಕುರಿತು, 'ಇನ್ನು ನಿನಗೆ ತಂದೆಯ ಆವಶ್ಯಕತೆಯಿಲ್ಲ; ನಿನಗೆ ಗಂಡನಿರುವ ನಷ್ಟೆ!' ಎಂದನು.

ಕೋಸೆಟ್ಟಳಿಗೆ ದುಃಖವು ಉಕ್ಕಿತು. ಅವಳು, 'ಏನು? ನನಗೆ ತಂದೆಯು ಆವಶ್ಯಕವಿಲ್ಲವೇ? ಸಾಮಾನ್ಯವಾದ ಲೋಕವ್ಯವ ಹಾರ ಬುದ್ಧಿಯಿಲ್ಲದವರಿಗೆ ಏನನ್ನು ಹೇಳಬೇಕೆಂಬುದೇ ನನಗೆ

ತೋರದಾಗಿದೆ,' ಎಂದು ಹೇಳಿ, ತಟ್ಟನೆ ರೇಗಿ, ಜೀನ್ ವಾಲ್ಜೀನನ ಕಡೆಗೆ ದುರದುರನೆ ನೋಡಿ, 'ಹಾಗಾದರೆ ನಾನು ಸುಖವಾಗಿರಬೇಕಾದುದು ನಿನಗೆ ಇಷ್ಟವಿಲ್ಲವಲ್ಲವೇ?' ಎಂದಳು.

ಅರಸಿಕತನದ ಭಾಷಣವು ಕೆಲವು ವೇಳೆ ಆಡಿದವರಿಗೆ ಗೋಚರವಿಲ್ಲದೆಯೇ, ಈಟಿಗಳಂತೆ ಇರಿಯುವುದುಂಟು. ಈ ಪ್ರಶ್ನೆಯು ಕೋಸೆಟ್ಟಳಿಗೆ ಸಾಮಾನ್ಯವಾಗಿ ಕಂಡರೂ ಜೀನ್ ವಾಲ್ಜೀನನಿಗೆ ಮಾತ್ರ ಬಹು ಕಠೋರವಾಗಿತ್ತು. ಕೋಸೆಟ್ಟಳು ಉಗುರಿನಿಂದ ಕರಪಲಮಾಡಬೇಕೆಂದು ಹೋಗಿ, ಶಸ್ತ್ರದಿಂದ ಸೀಳಿದಳು.

ಜೀನ್ ವಾಲ್ಜೀನನ ಮುಖವು ಕಳೆಗೆಟ್ಟಿತು. ಒಂದು ಕ್ಷಣಕಾಲ ಏನೊಂದು ಪ್ರತ್ಯುತ್ತರವನ್ನೂ ಹೇಳದೆ, ಸ್ತಬ್ಧನಾಗಿದ್ದು, ಅನಂತರ ತನ್ನಲ್ಲಿ ತಾನು ಒಂದು ವಿಚಿತ್ರ ರೀತಿಯಿಂದ 'ಅವಳ ಸುಖವೇ ನನ್ನ ಜೀವನದ ಗುರಿಯಾಗಿತ್ತು. ಇನ್ನು ದೇವರು ನನ್ನನ್ನು ತನ್ನ ಸನ್ನಿಧಿಗೆ ಕರೆದುಕೊಳ್ಳಬಹುದು. ಕೋಸೆಟ್, ನೀನು ಸುಖವಾಗಿದ್ದೀಯೆ. ನನಗೆ ಕಾಲವು ಸಮೀಪಿಸಿತು,' ಎಂದು ಗೊಣಗುಟ್ಟಿದನು.

ಇದನ್ನು ಕೇಳಿ ಕೋಸೆಟ್ಟಳು 'ಆಹಾ! ಅಪ್ಪಾ, ನನ್ನನ್ನು 'ಕೋಸೆಟ್' ಎಂದು ಕರೆದೆಯಲ್ಲವೆ!' ಎಂದು ಸಂತೋಷದಿಂದ ಓಡಿಬಂದು ಅವನ ಕುತ್ತಿಗೆಯನ್ನು ಬಾಚಿ ತಬ್ಬಿದಳು.

ಜೀನ್ ವಾಲ್ಜೀನನು, ಜೀವನದಲ್ಲಿ ನಿರಾಶನಾಗಿ ಅವಳನ್ನು ತನ್ನ ಹೃದಯಕ್ಕೆ ಬಲವಾಗಿ ಒತ್ತಿ ಬಿಗಿದಪ್ಪಿದನು. ಅವಳನ್ನು ತಾನು ಮತ್ತೆ ಹಿಂದಕ್ಕೆ ಕರೆದುಕೊಂಡು ಹೋಗುತ್ತಿರುವೆನೆಂಬಂತೆ ಅವನಿಗೆ ತೋರಿತು.

ಕೋಸೆಟ್ಟಳು, 'ಅಪ್ಪಾ, ನನಗೆ ಬಲು ಸಂತೋಷ. ನಿನಗೆ ನಮಸ್ಕಾರವಪ್ಪಾ,' ಎಂದಳು. ಈಗ ಜೀನ್ ವಾಲ್ಜೀನನಿಗೆ ಅವಳನ್ನು ಅಗಲಿ ಹೋಗುವುದು ಬಹು ದುಃಖಕರವಾಗುತ್ತ ಬಂತು. ಮೆಲ್ಲನೆ ಕೋಸೆಟ್ಟಳ ತೋಳನ್ನು ಬಿಡಿಸಿಕೊಂಡು, ತನ್ನ ಟೋಪಿಯನ್ನು ಕೈಗೆ ತೆಗೆದುಕೊಂಡನು.

ಕೋಸೆಟ್ಟಳು, 'ಒಳ್ಳೆಯದು! ಇನ್ನೇನು?' ಎಂದಳು.

ಜೀನ್ ವಾಲ್ಜೀನನು, 'ಮೇಡಮ್, ನಾನು ಹೊರಡುತ್ತೇನೆ. ಅವರು ನಿಮಗಾಗಿ ಕಾದಿರುವರು.' ಎಂದು ಉತ್ತರ ಕೊಟ್ಟು, ಬಾಗಿಲ ಬಳಿಗೆ ಹೋಗಿ, 'ನಾನು ನಿಮ್ಮನ್ನು "ಕೋಸೆಟ್" ಎಂದು ಕರೆದೆನು. ಇನ್ನೊಂದಾವೃತ್ತಿ ಹಾಗೆ ಕರೆಯುವುದಿಲ್ಲವೆಂದು ನಿಮ್ಮ ಯಜಮಾನರಿಗೆ ಹೇಳಿ. ನನ್ನನ್ನು ಕ್ಷಮಿಸಿ,' ಎಂದು ಮತ್ತೆ ಹೇಳಿ ಹೊರಕ್ಕೆ ಹೊರಟುಹೋದನು.

ಈ ರೀತಿಯಾಗಿ ಅವನು ಹೊರಟುಹೋದುದರ ಭಾವವೇನೆಂಬುದನ್ನರಿಯದೆ ಕೋಸೆಟ್ಟಳು ದಿಗ್ಭ್ರಾಂತಳಾದಳು.

---

ಮೇರಿಯುಸ್ಸನು ಕೋಸೆಟ್ಟಳನ್ನು ಜೀನ್ ವಾಲ್ಜೀನನಿಂದ ಸ್ವಲ್ಪ ಸ್ವಲ್ಪವಾಗಿ ದೂರಮಾಡುತ್ತ ಬಂದನು. ಈ ವಿಷಯದಲ್ಲಿ ಕೋಸೆಟ್ಟಳು ಯಾವ ಮಾತನ್ನೂ ಆಡದೆ ಸುಮ್ಮನಿದ್ದಳು. ತಾನು ಅಷ್ಟು ದಿನಗಳಿಂದಲೂ ತಂದೆಯೆಂದು ಕರೆದು ಪ್ರೀತಿಸುತ್ತಿದ್ದವನ ವಿಷಯದಲ್ಲಿ ಅವಳಿಗೆ ನಿಜವಾಗಿಯೂ ಬಹಳ ಪ್ರೇಮವಿತ್ತು. ಗಂಡನ ಮೇಲೆಯಾದರೋ ಮತ್ತೂ ಹೆಚ್ಚಿನ ಪ್ರೇಮವಿತ್ತು.

ಜೀನ್ ವಾಲ್ಜೀನನ ಮೇಲೆ ಆಪಾದಿತವಾಗಿದ್ದ ಎರಡು ವಿಷಯಗಳು ಮೇರಿಯುಸ್ಸನ ಮನಸ್ಸನ್ನು ಬಹಳವಾಗಿ ಕೊರೆಯುತ್ತಿದ್ದುವು. ಅಪರಾಧಿಯೆನಿಸಿ ಶಿಕ್ಷಿತನಾಗಿದ್ದ ಜೀನ್ ವಾಲ್ಜೀನನು, ಗ್ರಾಮಾಧಿಕಾರಿಯಾದ ಮೇಡಲೀನ್ ಎಂಬಾತನ ಹಣವನ್ನು ಕದ್ದಿದ್ದನೆಂಬದಾಗಿ ಬ್ಯಾಂಕಿನ ಗುಮಾಸ್ತನೊಬ್ಬನು ತನಗೆ ಹೇಳಿದ ವರ್ತಮಾನವು ಇವುಗಳಲ್ಲಿ ಒಂದು. ಈ ಕಾರಣದಿಂದ, ಮೇರಿಯುಸ್ಸನು, ತನಗೆ ವರದಕ್ಷಿಣೆಯಾಗಿ ಬಂದಿದ್ದ ಆರು ಲಕ್ಷ ಫ್ರಾಂಕುಗಳ ಹಣವನ್ನು ಮುಟ್ಟಲಿಷ್ಟಪಡದೆ, ಮೇಡಲೀನನು ಸಂಧಿಸಿದರೆ ಆತನಿಗೆ ಆ ಹಣವನ್ನು ಹಿಂದಕ್ಕೆ ಕೊಟ್ಟುಬಿಡಬೇಕೆಂದಾಲೋಚಿಸಿಕೊಂಡಿದ್ದನು.

ಅವನ ಮನಸ್ಸನ್ನು ಬಹಳವಾಗಿ ಬಾಧಿಸುತ್ತಿದ್ದ ಮತ್ತೊಂದು ವಿಷಯವೇನೆಂದರೆ: ಯುದ್ಧವು ನಡೆದ ದಿನ ಜೀನ್ ವಾಲ್ಜೀನನು ಜೇವರ್ಟನನ್ನು ಕರೆದುಕೊಂಡು ಹೋಗುತ್ತಿದ್ದುದನ್ನು ತಾನು ಮದ್ಯದ ಅಂಗಡಿಯ ಕಿಟಕಿಯಿಂದ ನೋಡಿದ್ದು, ಅನಂತರ ಗುಂಡು ಹಾರಿದ ಶಬ್ದವನ್ನು ಕೇಳಿದ್ದ ಕಾರಣ, ಜೀನ್ ವಾಲ್ಜೀನನು ಜೇವರ್ಟನನ್ನು ಕೊಂದಿದ್ದನೆಂದು, ತನ್ನ ಮನಸ್ಸಿಗುಂಟಾದ ಕಲ್ಪನೆಯು.

ಮೇರಿಯುಸ್ಸನಿಗೂ ಕೋಸೆಟ್ಟಳಿಗೂ ಮದುವೆಯಾಗಿ ಒಂದು ವರ್ಷ ಕಳೆಯಿತು. ಜೀನ್ ವಾಲ್ಜೀನನು ಇವರನ್ನು ನೋಡಿ

ಬಹಳ ದಿನಗಳಾಗಿದ್ದುದರಿಂದ ಅವನು ಅವರಿಗೆ ಹೊಸಬನಂ ತಾದನು. ಅವನು ಬರಬರುತ್ತ ಬಹಳ ನಿರ್ಬಲನಾಗಿ ರೋಗದಿಂದ ಮಲಗಿದನು. ಕಡೆಗೆ ಅವನ ಪರಿಚಾರಿಣಿಯು ವೈದ್ಯನನ್ನು ಕರೆ ತಂದಳು. ಆತನು ಜೀನ್ ವಾಲ್ಜೀನನನ್ನು ನೋಡಿ, ಮಾತನಾಡಿ ಮಹಡಿಯಿಂದಿಳಿದು ಬಂದ ಮೇಲೆ ಪರಿಚಾರಿಣಿಯು ವೈದ್ಯನನ್ನು ಪ್ರಶ್ನೆ ಮಾಡಿದಳು :

'ಏನು, ವೈದ್ಯರೇ, ವಿಚಾರ ?'

'ನಿಮ್ಮ ರೋಗಿಯ ರೋಗವು ಪ್ರಬಲವಾಗಿದೆ.'

'ಆತನ ರೋಗವಾದರೂ ಏನು ?'

'ಏನೆಂದು ಹೇಳಲಿ ! ಎಲ್ಲ ರೋಗವೂ ಇದೆ, ಒಂದು ರೋಗವೂ ಇಲ್ಲ. ಹೀಗಾಗಿದೆ. ನೋಡಿದರೆ ಆತನು ಯಾರೋ ತನಗೆ ಅತ್ಯಾಪ್ತರಾದ ಮಿತ್ರರನ್ನು ಕಳೆದುಕೊಂಡು ದುಃಖಪಡು ತ್ತಿರುವಂತೆ ಕಾಣುವುದು. ಇದರಿಂದ ಜನರು ಸಾಯುವುದೂ ಉಂಟು.'

'ಆತನು ತಮಗೆ ಏನನ್ನು ಹೇಳಿದನು ?'

'ತಾನು ಆರೋಗ್ಯವಾಗಿರುವೆನೆಂದು ಹೇಳಿದನು.'

'ತಾವು ಮತ್ತೆ ಇಲ್ಲಿಗೆ ಬರುವಿರಾ, ಪಂಡಿತರೇ ?'

'ಬರುವೆನು. ಆದರೆ, ನಾನಲ್ಲದೆ ಬೇರೊಬ್ಬರು ಬರಬೇಕು,' ಎಂದು ವೈದ್ಯನು ಉತ್ತರಕೊಟ್ಟನು.

ಇದಾದ ಸ್ವಲ್ಪ ಕಾಲದ ಮೇಲೆ, ಒಂದು ದಿನ ಜೀನ್ ವಾಲ್ಜೀನನಿಗೆ ಅತ್ಯಂತ ನಿಶ್ಶಕ್ತಿಯುಂಟಾಗಿ, ತನಗೆ ಅವಸಾನ ಕಾಲವು ಸಮೀಪಿಸಿತೆಂದು ಅವನಿಗೆ ತೋರಿತು. ಬಹು ಪ್ರಯತ್ನ ದಿಂದ, ತನ್ನ ಹಿಂದಣ ಕೆಲಸಗಾರನ ಉಡುಪನ್ನು ಧರಿಸಿ, ಹಸಿಬೆ ಯನ್ನು ತೆರೆದು, ಕೋಸೆಟ್ಟಳ ಕರಿಯ ಉಡುಪನ್ನು ತೆಗೆದು ಹಾಸುಗೆಯಮೇಲೆ ಹಾಸಿದನು. ಅನಂತರ, ಆಗ ಹಗಲಾಗಿ ಬೆಳಕಿದ್ದರೂ, ಎರಡು ಮೇಣದ ಬತ್ತಿಗಳನ್ನು ಮೇಜಿನಿಂದ ತೆಗೆದು, ಅಲ್ಲಿದ್ದ ಬೆಳ್ಳಿಯ ಕೊಳವೆಯೊಳಕ್ಕೆ ಸೆಕ್ಕಿ ಹಚ್ಚಿದನು. ಅದಾದ

ಮೇಲೆ ಬಹು ಪ್ರಯಾಸದಿಂದ ಕೋಸೆಟ್ಟಳಿಗೆ ಒಂದು ಕಾಗದವನ್ನು ಬರೆಯಲಾರಂಭಿಸಿದನು.

ಅನಂತರ ಹಾಗೆಯೇ ಬರೆವಣಿಗೆಯನ್ನು ನಿಲ್ಲಿಸಿದನು. ಲೇಖಿನಿಯು ಬೆರಳಿಂದ ಕಳಚಿ ಬಿದ್ದುಹೋಯಿತು. ತನ್ನ ಸ್ಥಿತಿಯನ್ನು ಕುರಿತು ಅವನಿಗೆ ಆಗಾಗ ಉಂಟಾಗುತ್ತಿದ್ದ ಕೇವಲ ನಿರಾಶೆಯ ದುಃಖದಲ್ಲಿ ಸಿಕ್ಕಿ, ಬಿಕ್ಕಿಬಿಕ್ಕಿ ಅಳುವುದಕ್ಕಾರಂಭಿಸಿದನು. ಪಾಪ! ಎರಡು ಕೈಗಳಿಂದಲೂ ತಲೆಯನ್ನು ಹಿಡಿದುಕೊಂಡು ಚಿಂತಿಸುತ್ತ ಕುಳಿತು, ತನ್ನಲ್ಲಿ ತಾನು ಗಟ್ಟಿಯಾಗಿ ಅಳುವುದಕ್ಕೆ ಮೊದಲು ಮಾಡಿದನು. ಪಾಪ! ಅವನ ಆಕ್ರಂದನವನ್ನು ದೇವರೊಬ್ಬನೇ ಕೇಳಿದವನು.

'ಮುಗಿಯಿತು, ಎಲ್ಲವೂ ಮುಗಿಯಿತು. ಇನ್ನು ಅವಳನ್ನು ನಾನೆಂದೆಂದಿಗೂ ಕಾಣುವಂತಿಲ್ಲ. ನನ್ನ ಜೀವನವಾಸದಲ್ಲಿ ಅವಳು ನನಗೊಂದು ಆನಂದಜ್ಯೋತಿಯಾಗಿದ್ದಳು. ಇನ್ನು ಅವಳ ಮುಖವನ್ನೇ ನೋಡದೆ ನಾನು ಅಂಧಕಾರದಲ್ಲಿ ಬೀಳುವೆನು. ಅಯ್ಯೋ! ಒಂದು ನಿಮಿಷ ಮಾತ್ರ, ಒಂದು ಕ್ಷಣಮಾತ್ರ ಅವಳ ಧ್ವನಿಯನ್ನು ಕೇಳಿ, ಅವಳ ಉಡುಪುಗಳನ್ನು ಮುಟ್ಟಿ, ಆ ದೇವ ಕನ್ಯೆಯ ಮುಖವನ್ನು ನೋಡಿ ಸಾಯಬೇಕಲ್ಲವೇ? ಸಾಯುವುದಕ್ಕೆ ನನಗೆ ಭಯವಿಲ್ಲ; ಆದರೆ ಅವಳನ್ನು ನೋಡದೆ ಸಾಯುವುದೆಂದರೆ ನನ್ನ ಎದೆಯು ಒಡೆಯುವುದು. ಅವಳು ನನ್ನನ್ನು ನೋಡಿ ಒಂದು ಸಲ ಕಿರುನಗೆ ನಕ್ಕರೆ ಸಾಕು. ನನ್ನೊಡನೆ ಒಂದು ಮಾತನ್ನಾಡಿದರೂ ಸಾಕು. ಅದರಿಂದ ಯಾರಿಗಾದರೂ ತೊಂದರೆಯೇ? ಇಲ್ಲ, ಅದೆಲ್ಲವೂ ಪೂರಯಿಸಿತು. ಎಲ್ಲಕ್ಕೂ ಅಂತ್ಯವಾಯಿತು. ಇದೋ, ನಾನೊಬ್ಬಂಟಿಗನೇ! ದೇವರೇ! ದೇವರೇ! ಅವಳನ್ನು ನಾನು ಇನ್ನೆಂದೆಂದಿಗೂ ನೋಡುವಂತಿಲ್ಲವೇ!' ಎಂದು ದುಃಖಿಸುತ್ತಿದ್ದನು.

ಇಷ್ಟು ಹೊತ್ತಿಗೆ ಯಾರೋ ಕದವನ್ನು ತಟ್ಟಿದರು.

ಅದೇ ದಿನ ಥೆನಾರ್ಡಿಯರನು, ಮೇರಿಯಸ್ಸನಿಗೆ, ಜೀನ್

ವಾಲ್ಜೀನನು ತಲೆತಪ್ಪಿಸಿಕೊಂಡು ತಿರುಗುವ ಅಪರಾಧಿಯೆಂದು ಹೇಳಿ, ಅವನಿಂದ ಸ್ವಲ್ಪ ಹಣವನ್ನು ಕಸಿದುಕೊಳ್ಳಬೇಕೆಂಬ ಉದ್ದೇಶ ದಿಂದ ಮೇರಿಯುಸ್ಸನ ಮನೆಗೆ ಬಂದಿದ್ದನು. ಜೀನ್ ವಾಲ್ಜೀನನು ಮೇಡಲಿನನ ಹಣವನ್ನು ಕದ್ದ ಕಳ್ಳನೆಂದೂ, ಜೇವರ್ಟನನ್ನು ಕೊಂದ ಕೊಲೆಪಾತಕನೆಂದೂ ತನಗೆ ತಿಳಿದಿತ್ತೆಂದು ಮೇರಿಯುಸ್ಸನು ಥೆನಾರ್ಡಿಯರನಿಗೆ ಉತ್ತರ ಹೇಳಿದನು. ಥೆನಾರ್ಡಿಯರನು ಹಳದಿಯ ಬಣ್ಣಕ್ಕೆ ತಿರುಗಿದ್ದ ಕೆಲವು ಹಳೆಯ ವರ್ತಮಾನ ಪತ್ರಿಕೆಗಳ ತುಂಡುಗಳನ್ನು ತೋರಿಸಿ ಮೇರಿಯುಸ್ಸನ ಈ ತಪ್ಪು ತಿಳುವಳಿಕೆಯನ್ನು ತಿದ್ದಿದನು. ಒಂದರಲ್ಲಿ ಜೀನ್ ವಾಲ್ಜೀನನೂ ಮೇಡಲಿನನೂ ಒಬ್ಬನೇ ಮನುಷ್ಯನೆಂದು ಸ್ಫುಟಪಟ್ಟಿತ್ತು. ಇನ್ನೊಂದರಲ್ಲಿ ಜೇವರ್ಟನು ತನ್ನ ಮೇಲ್ಪಟ್ಟ ಅಧಿಕಾರಿಗೆ ಬರೆದಿದ್ದ ಒಂದು ಲೇಖನದಿಂದ, ಒಬ್ಬ ಮನುಷ್ಯನು ತನ್ನ ತಲೆಯನ್ನು ಹಾರಿಸುವುದಕ್ಕೆ ಪ್ರತಿಯಾಗಿ ಪಿಸ್ತೂಲನ್ನು ಅಂತರಿಕ್ಷಕ್ಕೆ ಹಾರಿಸಿ ತನ್ನ ಪ್ರಾಣವನ್ನು ಉಳಿಸಿದನೆಂದು ತಿಳಿಸಿದ್ದ ವಿಚಾರವು ಪ್ರಕಟವಾಗಿತ್ತು.

ಇದರಿಂದ ಜೀನ್ ವಾಲ್ಜೀನನು ತಟ್ಟನೆ ಘನತೆಗೇರಿ ಅಪವಾದ ವಿಮುಕ್ತನಾದನು. ಮೇರಿಯುಸ್ಸನಿಗೆ ಆನಂದವು ಉಕ್ಕಿ ಮೇರೆ ಮೀರಿ, 'ಆಹಾ! ಈ ದುಃಖಿಯು ಬಹು ವಿಚಿತ್ರ ಪುರುಷನು! ಆ ಆಸ್ತಿಯೆಲ್ಲವೂ ಅವನದೇ ನಿಜ. ಅವನೇ ಮೇಡಲಿನನು. ಅವನೇ ಬಡವರ ಬಂಧು, ದೇವತಾ ಪುರುಷ, ಅವನೇ ಜೀನ್ ವಾಲ್ಜೀನನು—ಜೇವರ್ಟನ ಪ್ರಾಣದಾನ ಮಾಡಿದವನು! ಅವನೇ ಧೀರ! ಅವನೇ ಪೂಜ್ಯ!' ಎಂದು ಉದ್ಘೋಷಿಸಿದನು.

ಅದಕ್ಕೆ ಥೆನಾರ್ಡಿಯರನು, 'ಅವನು ಪೂಜ್ಯನೂ ಅಲ್ಲ, ಧೀರನೂ ಅಲ್ಲ. ಅವನೊಬ್ಬ ಕೊಲೆಪಾತಕ, ಕಳ್ಳ. ಸುಮಾರು ಒಂದು ವರ್ಷದ ಹಿಂದೆ, ಪ್ಯಾರಿಸ್ ನಗರದಲ್ಲಿ ಯುದ್ಧವು ನಡೆದ ದಿನ, ಒಬ್ಬನು ಈ ನಗರದ ನೆಲಮಾಳಿಗೆಯ ಚರಂಡಿಯೊಳಗಿನಿಂದ ತಾನು ಕೊಂದಿದ್ದ ಒಬ್ಬ ಮನುಷ್ಯನ ಹೆಣವನ್ನು

ಹೊತ್ತುಕೊಂಡು ಬರುತ್ತಿದ್ದುದನ್ನು ನಾನು ಕಂಡು ಅವನೊಡನೆ ಮಾತನಾಡುತ್ತ, ಮೆಲ್ಲನೆ ಅವನಿಗೆ ತಿಳಿಯದಹಾಗೆ ಆ ಸತ್ತವನ ಅಂಗಿಯಲ್ಲಿ ಒಂದು ಚೂರು ಬಟ್ಟೆಯನ್ನು ಹರಿದುಕೊಂಡೆನು. ತಿಳಿಯಿತೇ ? ಆ ಹೆಣವನ್ನು ಹೊತ್ತುಕೊಂಡು ಬರುತ್ತಿದ್ದವನೇ ಜೀನ್ ವಾಲ್ಜೀನನು. ಅವನೊಡನೆ ಮಾತನಾಡಿದವನೇ ಈಗ ನಿನ್ನೊಡನೆ ಮಾತನಾಡುತ್ತಿರುವ ನಾನು. ಇದೋ ಆ ಅಂಗಿಯ ಚೂರು.'

ಥೆನಾರ್ಡಿಯರನು ಹೀಗೆ ಹೇಳುತ್ತ, ರಕ್ತದ ಕರೆಗಳಾಗಿದ್ದ ಒಂದು ಕಪ್ಪು ಬಟ್ಟೆಯ ತುಂಡನ್ನು ತನ್ನ ಜೇಬಿನಿಂದ ತೆಗೆದು ತೋರಿಸಿದನು.

ಮೇರಿಯಸ್ಸನ ಮುಖವು ಕಳೆಗೆಟ್ಟಿತು. ಉಸಿರಾಡಿಸು ವನೋ ಇಲ್ಲವೋ ಎಂಬಂತೆ ಸ್ತಬ್ಧನಾದನು. ಅವನ ದೃಷ್ಟಿ ಯೆಲ್ಲವೂ ಆ ಕರಿಯ ಬಟ್ಟೆಯ ಮೇಲೆಯೇ ನಟ್ಟಿತು. ಆಗ ಒಂದು ಮಾತನ್ನೂ ಆಡದೆ, ಆ ಬಟ್ಟೆಯನ್ನೇ ನೋಡುತ್ತ, ಹಿಂದು ಹಿಂದಕ್ಕೆ ಗೋಡೆಯ ಬಳಿಗೆ ಹೋಗಿ, ಚಿಮಣಿಯ ಬಳಿಯಲ್ಲಿದ್ದ ಕಿರುಮನೆಯ ಬಾಗಿಲಿನ ಬೀಗಕ್ಕೆ ತಗುಲಿಸಿದ್ದ ಬೀಗದಕೈಗಾಗಿ ಬಲಗೈಯಿಂದ ತಡಕಿದನು. ಬೀಗದಕೈ ಸಿಕ್ಕಿತು. ಥೆನಾರ್ಡಿ ಯರನು ಹಿಡಿದಿದ್ದ ಬಟ್ಟೆಯ ಚೂರಿನ ಮೇಲೆ ಬೆರಗಾಗಿ ನಟ್ಟಿದ್ದ ಇವನ ದೃಷ್ಟಿಯನ್ನು ಬೇರೆಮಾಡದೆ ಹಾಗೆಯೇ ಹಿಂದಕ್ಕೆ ಕೈ ಹಾಕಿದನು.

'ಆತನು ಹೊತ್ತು ತಂದ ಮನುಷ್ಯನು ನಾನೇ, ಇದೋ ಆ ಅಂಗಿ!' ಎಂದು ಮೇರಿಯಸ್ಸನು ಕೂಗಿ, ರಕ್ತದ ಕಲೆಗಳಿಂದ ತುಂಬಿದ್ದ ಒಂದು ಹಳೆಯ ಕರಿಯ ಅಂಗಿಯನ್ನು ಜಮಖಾನದ ಮೇಲೆ ತೆಗೆದೆಸೆದನು. ಥೆನಾರ್ಡಿಯರನ ಕೈಯಿಂದ ಆ ಬಟ್ಟೆಯ ಚೂರನ್ನು ಎಳೆದುಕೊಂಡು, ಅಂಗಿಯ ಮೇಲಕ್ಕೆ ಬಾಗಿ, ಹರಿದಿದ್ದ ಅಂಚಿಗೆ ಅದನ್ನು ಇಟ್ಟು ನೋಡಿದನು. ಅಂಚುಗಳು ಸ್ವಲ್ಪವೂ ವ್ಯತ್ಯಾಸವಿಲ್ಲದೆ ಸರಿಯಾಗಿ ಹೊಂದಿಕೊಂಡುವು. ಈ

ಚೂರನ್ನು ಸೇರಿಸಲು ಅಂಗಿಯು ಪೂರ್ತಿಯಾಗಿ, ಹರಕು ಮುಚ್ಚಿತು.

ಮೇರಿಯುಸ್ಸನು ನಡುಗುತ್ತ, ನಿರಾಶನಾಗಿ, ತಳಪಳಿಸುತ್ತ ಎದ್ದನು. ಜೇಬಿಗೆ ಕೈಹಾಕಿ, ಮಹಾ ರೋಷದಿಂದ ಥೆನಾರ್ಡಿಯರನ ಬಳಿಗೆ ಬಂದು, ಒಂದು ಸಾವಿರದೈನೂರು ಫ್ರಾಂಕುಗಳ ಬೆಲೆಯ ನೋಟುಗಳನ್ನು ಮುಷ್ಟಿಯಿಂದ ಅವನ ಮುಖಕ್ಕೆ ಚುಚ್ಚುವಂತೆ ಹಿಡಿದು, 'ತೆಗೆದುಕೊ. ನೀನೊಬ್ಬ ನೀಚ, ಸುಳ್ಳುಗಾರ, ಚಾಡಿಕೋರ, ಪಟಿಂಗ! ಆ ಮನುಷ್ಯನಲ್ಲಿ ದೋಷಾರೋಪಣೆ ಮಾಡಲು ಬಂದು, ಆತನು ಸತ್ಯವಂತನೂ ಯೋಗ್ಯನೂ ಎಂಬುದನ್ನು ವ್ಯಕ್ತಗೊಳಿಸಿದೆ. ಆತನನ್ನು ನಾಶಮಾಡಬೇಕೆಂದು ಬಂದು, ಆತನ ಪ್ರಭಾವವನ್ನು ಹೊರಗೆಡಹಿದವನಾದೆ. ಹೋಗು, ತೊಲಗು! ವಾಟರ್ಲೂಕದನ ಸಂದರ್ಭದಿಂದ ಮಾತ್ರವೇ ನೀನು ನನ್ನ ಕೋಪದಿಂದ ಪಾರಾಗಿರುವೆ,' ಎಂದು, ಕೆರಳಿ ನುಡಿದನು.

ಹೀಗೆ ಮೇರಿಯುಸ್ಸನು ಒಂದು ಸಾವಿರದೈನೂರು ಫ್ರಾಂಕುಗಳ ನೋಟುಗಳನ್ನು ಥೆನಾರ್ಡಿಯರನ ಕಡೆಗೆ ಎಸೆದು ಅವನನ್ನು ಮನೆಯಿಂದಾಚೆಗೆ ತಳ್ಳಿದನು. ಅನಂತರ ಕೋಸೆಟ್ಟಳನ್ನು ಕೂಗಿ, ಜೀನ್ ವಾಲ್ಜೀನನನ್ನು ನೋಡಬೇಕೆಂದು ಆತುರದಿಂದ ಹೊರಟನು.

---

ಕದವನ್ನು ತಟ್ಟಿದ ಶಬ್ದವನ್ನು ಕೇಳಿ ಜೀನ್ ವಾಲ್ಜೀನನು ತಲೆಯೆತ್ತಿ ನೋಡಿ, ಮೆಲ್ಲನೆ, 'ಒಳಗೆ ಬನ್ನಿ,' ಎಂದನು.

ಬಾಗಿಲು ತೆರೆಯಿತು. ಕೋಸೆಟ್ಟಳೂ ಮೇರಿಯುಸ್ಸನೂ ಅವನ ಕಣ್ಣಿಗೆ ಬಿದ್ದರು. ಕೋಸೆಟ್ಟಳು ಕೊಠಡಿಯೊಳಗೆ ನುಗ್ಗಿ ಓಡಿಬಂದಳು. ಮೇರಿಯುಸ್ಸನು, ಬಾಗಿಲಿನ ಚೌಕಟ್ಟಿಗೆ ಒರಗಿ, ಹೊಸ್ತಿಲಿನ ಮೇಲೆಯೇ ನಿಂತನು.

ಕುಗ್ಗಿ, ಕಂಗೆಟ್ಟು, ನೋಡುವುದಕ್ಕೆ ಭಯವಾಗುವಂತಿದ್ದ ಜೀನ್ ವಾಲ್ಜೀನನು ಎರಡು ತೋಳುಗಳನ್ನೂ ಚಾಚಿ, ನಡುಗುತ್ತ, ಕುರ್ಚಿಯಿಂದ ಮೇಲಕ್ಕೆ ಮಿತಿಮೀರಿದ ಆನಂದದಿಂದ ಎದ್ದು, 'ಕೋಸೆಟ್' ಎಂದನು.

ಕೋಸೆಟ್ಟಳಿಗೆ ದುಃಖಾನಂದಗಳೆರಡರಿಂದಲೂ ಉಸಿರಾಡದಂತೆ ಆಗಿ, ಅವಳು 'ಅಪ್ಪಾ!' ಎಂದು ಜೀನ್ ವಾಲ್ಜೀನನ ಎದೆಯ ಮೇಲೆ ಬಿದ್ದು ಆಲಿಂಗಿಸಿದಳು.

ಜೀನ್ ವಾಲ್ಜೀನನು ಹುಚ್ಚು ಹಿಡಿದವನಂತೆ, 'ಏನು? ಕೋಸೆಟ್ಟೆ? ನೀವೇ? ಆಹಾ! ನನ್ನ ದೈವವೇ! ಕೋಸೆಟ್, ನಿಜವಾಗಿಯೂ ನೀನೇ? ನೀನು ಇಲ್ಲಿಗೆ ಬಂದೆಯಾ? ಹಾಗಾದರೆ ನೀನು ನನ್ನನ್ನು ಕ್ಷಮಿಸಿರುವೆಯಾ?'

ಮೇರಿಯುಸ್ಸನು, ಕಣ್ಣೀರು ಕೆಳಗೆ ಬೀಳದಂತೆ ತನ್ನ ರೆಪ್ಪೆಗಳನ್ನು ಮುಚ್ಚಿ, ಮುಂದಕ್ಕೆ ಅಡಿಯಿಟ್ಟು, ಉಕ್ಕಿ ಬರುವ ದುಃಖವನ್ನು ಅಡಗಿಸಿಕೊಂಡು, ಮೆಲ್ಲನೆ, 'ಅಪ್ಪಾ, ತಂದೇ!' ಎಂದನು.

ಅದಕ್ಕೆ ಜೀನ್ ವಾಲ್ಜೀನನು, 'ಓಹೋ! ನೀನೂ ನನ್ನನ್ನು ಮನ್ನಿಸಿದೆಯಾ?' ಎಂದನು.

ಮೇರಿಯುಸ್ಸನು ಒಂದು ಮಾತನ್ನೂ ಆಡಲಾರದೆ ಸುಮ್ಮನಿರಲು, ಜೀನ್ ವಾಲ್ಜೀನನು, 'ನಿನಗೆ ದೇವರು ಒಳ್ಳೆಯದನ್ನು ಮಾಡಲಿ,' ಎಂದನು.

ಕೋಸೆಟ್ಟಳು, ಹೊದ್ದಿದ್ದ ಶಾಲನ್ನು ತೆಗೆದುಹಾಕಿ, ತನ್ನ ಟೋಪಿಯನ್ನು ಹಾಸುಗೆಯ ಮೇಲಕ್ಕೆ ಎಸೆದು, 'ಇವುಗಳಿಂದ ತೊಂದರೆ,' ಎಂದು ಹೇಳಿ, ಮುದುಕನ ಮೊಣಕಾಲಿನ ಮೇಲೆ ಕುಳಿತು, ಅವನ ಬಿಳಿಯ ಕೂದಲನ್ನು ಅಂದವಾಗಿ ನೇವರಿಸಿ ಅವನ ಹಣೆಯನ್ನು ಮುದ್ದಿಟ್ಟಳು.

ಆಗ ಜೀನ್ ವಾಲ್ಜೀನನು, ತೊದಲು ಮಾತುಗಳಿಂದ, 'ಅಯ್ಯೋ! ನಾವು ಎಷ್ಟು ಅವಿವೇಕಿಗಳು! ನಾನು, ಇನ್ನು ಇವಳನ್ನು ಎಂದಿಗೂ ನೋಡುವುದೇ ಇಲ್ಲವೆಂದು ತಿಳಿದಿದ್ದೆನು. ಮಾನ್ಸಿಯುರ್ ಪಾಂಟ್‌ಮರ್ಸಿ, ನೀನು ಒಳಗೆ ಬಂದಾಗ, ನನ್ನಲ್ಲಿ ನಾನು, "ಎಲ್ಲವೂ ಮುಗಿಯಿತು. ಅವಳ ಪುಟ್ಟ ಉಡುಪುಗಳು ಮಾತ್ರ ಇಲ್ಲಿವೆ. ನಾನು ಮಹಾ ದುಃಖಿಯು, ಮತ್ತೆ ಕೋಸೆಟ್ಟಳನ್ನು ನಾನು ಎಂದಿಗೂ ನೋಡುವಂತಿಲ್ಲ," ಎಂದು ಮಾತನಾಡಿಕೊಳ್ಳುತ್ತಿದ್ದೆನು. ನೀವು ಮಹಡಿಯ ಮೆಟ್ಟಲನ್ನು ಹತ್ತಿ ಬರುತ್ತಿರುವಾಗಲೇ ಹೀಗೆ ಹೇಳಿಕೊಳ್ಳುತ್ತಿದ್ದೆನು. ನಾನು ಅವಿವೇಕಿಯಲ್ಲವೇ? ಆಲೋಚಿಸು. ನಾವು ದೇವರಿರುವನೆಂಬುದನ್ನು ಗಮನಿಸದೆಯೇ ಆಲೋಚನೆಗಳನ್ನು ಮಾಡುವೆವು. ದೇವರು ಮಾತ್ರ, "ಅಯ್ಯೋ ಮಂಕಾ! ನಾನು ನಿನ್ನ ಕೈಬಿಡುವೆನೆಂದು ತಿಳಿದೆಯಾ? ಇಲ್ಲ, ಇಲ್ಲ, ಹಾಗಾಗಲಾರದು. ಎಲೈ ದೈವೀ ವ್ಯಕ್ತಿಯೇ ಬಾ, ಇಲ್ಲಿ ನಿನ್ನಂತಹ ಸ್ವರ್ಗೀಯ ದೇವತೆಯ ಸಹಾಯವನ್ನು ಅಪೇಕ್ಷಿಸುತ್ತಿರುವ ಬಡವನಾದ ಸತ್ಪುರುಷನೊಬ್ಬನಿರುವನು," ಎಂದು ಹೇಳಿದನು. ಆ ದೇವಭಾಮಿನಿಯು ಬಂದೇ ಬಂದಳು. ನನ್ನ ಮುದ್ದು ಕೋಸೆಟ್ಟಳನ್ನು ಮತ್ತೆ ನೋಡಿದೆನು! ಅಯ್ಯೋ! ನಾನು ಎಷ್ಟು ದುಃಖಿತನಾಗಿದ್ದೆನು!' ಎಂದನು.

ಒಂದು ಕ್ಷಣಮಾತ್ರ ಮಾತನಾಡಲಾರದೆ ಸುಮ್ಮನಿದ್ದು, 'ಆಗಾಗ ಕೋಸೆಟ್ಟಳನ್ನು ಸ್ವಲ್ಪ ಹೊತ್ತಿನ ವರೆಗಾದರೂ ನೋಡಬೇಕೆಂದು ನನಗೆ ನಿಜವಾಗಿಯೂ ಬಹಳ ಅಪೇಕ್ಷೆಯಿತ್ತು.

ಮನಸ್ಸು ತನ್ನ ಸಂತೋಷಕ್ಕಾಗಿ ಯಾವುದಾದರೂ ಒಂದು ಅವಲಂಬನವನ್ನು ಬಯಸುವುದು ಸ್ವಭಾವ. ಆದರೂ ನನ್ನ ಮನಸ್ಸಿನ ಆನಂದಕ್ಕೆ ನಾನೇ ಪ್ರತಿಬಂಧಕನಾಗಿರುವೆನೆಂಬುದು ನನಗೆ ಚೆನ್ನಾಗಿ ಗೊತ್ತಿದ್ದಿತು. ಅದಕ್ಕೆ ಕಾರಣಗಳನ್ನಾಲೋಚಿಸಿ, ಅವರಿಗೆ ನಾನು ಬೇಕಿಲ್ಲ, ನನ್ನ ಸ್ಥಳದಲ್ಲಿ ನಾನು ಬಿದ್ದಿರಬೇಕಲ್ಲದೆ ಅವರ ಸಂಗಡಲೇ ಕಡೆಯವರೆಗೂ ಇರುವುದಕ್ಕೆ ನನಗೆ ಅಧಿಕಾರವಿಲ್ಲವೆಂದು ನನ್ನ ಮನಸ್ಸಿಗೆ ನಾನೇ ಹೇಳಿ ಕೊಂಡೆನು. ಆಹಾ, ದೇವಾ! ಮತ್ತೆ ಅವಳನ್ನು ನೋಡಿದೆನಲ್ಲವೆ!' ಎಂದನು.

ಅನಂತರ ಮೇರಿಯಸ್ಸನ ಕಡೆಗೆ ತಿರುಗಿ, 'ನೀನೂ ಸಹ ಬಂದಿರುವೆ! ಮಾನ್‌ಸಿಯುರ್ ಫಾಂಟ್‌ಮರ್ಸಿ, ನನ್ನನ್ನು ಕ್ಷಮಿಸು,' ಎಂದು, ಮತ್ತೆ ಮತ್ತೆ ನುಡಿದನು.

ಈ ಮಾತುಗಳನ್ನು ಕೇಳಿದೊಡನೆಯೇ, ಮೇರಿಯಸ್ಸನ ಮನಸ್ಸಿನ ಭಾವವು ಉಕ್ಕಿ ಹೊರಹೊಮ್ಮಿತು. ಅವನು, 'ಕೋಸೆಟ್, ಕೇಳಿದೆಯಾ? ಈತನು ಯಾವಾಗಲೂ ಹೀಗೆಯೇ! ನನ್ನ ಪ್ರಾಣವನ್ನು ಉಳಿಸಿದ ಈತನು, ತಾನೇ ನನ್ನ ಕ್ಷಮೆಯನ್ನು ಬೇಡುತ್ತಿರುವನು. ಇಷ್ಟೇ ಅಲ್ಲ. ನಿನ್ನನ್ನು ಬೇರೆ ನನಗೆ ಕೊಟ್ಟಿರುವನು. ನನ್ನ ಪ್ರಾಣವನ್ನೂ ಉಳಿಸಿ, ನಿನ್ನನ್ನೂ ನನಗೆ ಕೊಟ್ಟು, ತಾನು ಯಾವ ಸುಖಪಟ್ಟನು? ತನ್ನ ಸುಖಪರಿತ್ಯಾಗದಿಂದ ಆತ್ಮ ಯಜ್ಞವನ್ನೇ ಮಾಡಿಕೊಳ್ಳುತ್ತಿರುವನು. ಮನುಷ್ಯನೆಂದರೆ ಇವನು. ಕೃತಘ್ನನೂ, ಮರವೆಗೆ ವಶನಾದ ನಿಷ್ಕರುಣಿಯೂ, ಅಪರಾಧಿಯೂ ಆಗಿರುವ ನನಗೆ ವಂದನೆಯನ್ನರ್ಪಿಸುವನು. ಈ ಮಹಾ ಪುರುಷನ ಪಾದಸೇವೆಯಿಂದ ನನ್ನ ಜೀವಮಾನವೆಲ್ಲವನ್ನೂ ಕಳೆದರೂ ಅದು ಅತ್ಯಲ್ಪವೇ ಆಗುವುದು,' ಎಂದನು.

ಅದಕ್ಕೆ ಜೀನ್ ವಾಲ್ಜೀನನು ಪಿಸುಮಾತಿನಿಂದ, 'ಹುಶ್! ಹುಶ್! ಅದೆಲ್ಲವನ್ನೂ ಏತಕ್ಕೆ ಹೇಳುವೆ, ಒಂದನ್ನೂ ಹೇಳಬೇಡ,' ಎಂದನು.

ಆಗ ಮೇರಿಯಸ್ಸನು ಭಕ್ತಿಗೌರವಭರಿತವಾದ ಕೋಪದಿಂದ,

'ತಂದೇ, ಆದರೆ ನೀವು ಆ ವಿಷಯಗಳೆಲ್ಲವನ್ನೂ ಏತಕ್ಕೆ ನನಗೆ ಹೇಳಲಿಲ್ಲ? ಅದು ನಿಮ್ಮದೂ ತಪ್ಪು. ನೀವು ಜನರ ಪ್ರಾಣವನ್ನು ಉಳಿಸುವಿರಿ, ಅದನ್ನು ಅವರಿಗೆ ತಿಳಿಸದೆ ಗೋಪ್ಯವಾಗಿಡುವಿರಿ. ಇನ್ನೂ ಎಷ್ಟೋ ಉತ್ತಮ ಕಾರ್ಯಗಳನ್ನು ಮಾಡಿ, ನಿಮ್ಮ ನಿಜ ಸ್ಥಿತಿಯನ್ನು ಹೇಳುವುದರಲ್ಲಿ ನಿಮ್ಮನ್ನು ನೀವೇ ದೂರಿ ದೂಷಿಸಿ ಕೊಳ್ಳುವಿರಿ. ಇದು ಬಹಳ ಭಯಂಕರ ವಿಚಾರ,' ಎಂದನು.

ಅದಕ್ಕೆ ಜೀನ್ ವಾಲ್ಜೀನನು, 'ನಾನು ನಿಜಾಂಶವನ್ನೇ ಹೇಳಿದೆನು,' ಎಂದನು.

ಮೇರಿಯುಸ್ಸನು, 'ಇಲ್ಲ; ನಿಜಾಂಶವೆಲ್ಲವನ್ನೂ ಹೇಳಿಬಿಟ್ಟಿದ್ದರೆ, ಅದು ನಿಜವಾಗುತ್ತಿದ್ದಿತು. ನೀವು ಹಾಗೆ ಹೇಳಲಿಲ್ಲ. ನೀವು ಮೂನ್‌ಸಿಯುರ್ ಮೇಡಲಿನನಾಗಿದ್ದಿರಿ; ಆ ವಿಚಾರವನ್ನೇತಕ್ಕೆ ಹೇಳಲಿಲ್ಲ? ನೀವು ಜೇವರ್ಟನ ಪ್ರಾಣವನ್ನು ಉಳಿಸಿದ್ದಿರಿ; ಅದನ್ನೇತಕ್ಕೆ ಹೇಳಲಿಲ್ಲ? ನನ್ನ ಪ್ರಾಣವುಳಿದುದೂ ನಿಮ್ಮಿಂದ. ಅದನ್ನೇತಕ್ಕೆ ಹೇಳಲಿಲ್ಲ?' ಎಂದು ಕೇಳಿದನು.

'ಏತಕ್ಕೆಂದರೆ, ನಾನು ಇವೆಲ್ಲವನ್ನೂ ವಿವರವಾಗಿ ಹೇಳಿದ್ದರೆ ಎಲ್ಲರಿಗೂ ಅದರಿಂದ ತೊಂದರೆಯುಂಟಾಗುತ್ತಿದ್ದಿತು.'

'ಏತಕ್ಕೆ ತೊಂದರೆ? ಯಾರಿಗೆ ತೊಂದರೆ? ನೀವು ಇಲ್ಲಿಯೇ ಇರುವಿರೆಂದು ತಿಳಿದಿರುವಿರಾ? ನಾವು ನಿಮ್ಮನ್ನು ಹಿಂದಕ್ಕೆ ಕರೆದುಕೊಂಡು ಹೋಗುವೆವು. ನೀವು ನಮಗೆ ಸೇರಿದವರು, ನಮ್ಮಲ್ಲಿ ಒಬ್ಬರು. ನೀವು ಅವಳಿಗೂ ತಂದೆ, ನನಗೂ ತಂದೆ; ನೀವು ಈ ಭಯಂಕರವಾದ ಮನೆಯಲ್ಲಿ ಒಬ್ಬರೇ ಇನ್ನು ಒಂದು ದಿನವೂ ಇರಕೂಡದು. ನಾಳೆಯ ದಿನ, ನೀವು ಇಲ್ಲಿಯೇ ಇರುವಿರೆಂದು ತಿಳಿಯಬೇಡಿ.'

ಜೀನ್ ವಾಲ್ಜೀನನು, 'ನಾಳೆಯ ದಿನ ನಾನು ಇಲ್ಲಿಯೂ ಇರುವುದಿಲ್ಲ; ಮತ್ತು ನಿಮ್ಮ ಮನೆಯಲ್ಲಿಯೂ ಇರುವುದಿಲ್ಲ,' ಎಂದನು.

ಬಾಗಿಲಲ್ಲಿ ಏನೋ ಶಬ್ದವಾಯಿತು. ಅದು ವೈದ್ಯನು

ಒಳಕ್ಕೆ ಬರುತ್ತಿದ್ದ ಶಬ್ದವು. ಜೀನ್ ವಾಲ್ಜೀನನು, 'ನಮಸ್ಕಾರ ವೈದ್ಯರೇ, ಹೋಗಿಬರುತ್ತೇನೆ ಇದೋ, ನನ್ನ ಮಕ್ಕಳು ಇವರು,' ಎಂದನು.

ಮೇರಿಯಸ್ಸನು ವೈದ್ಯನ ಬಳಿಗೆ ಬಂದು, 'ವೂನ್'ಸಿ ಯುರ್ ?' ಎಂದನು. ಅವನು ಉಚ್ಚರಿಸಿದ ರೀತಿಯಿಂದ ಅದರಲ್ಲಿ ಒಂದು ಪ್ರಶ್ನೆಯೇ ಗರ್ಭಿತವಾಗಿತ್ತು.

ವೈದ್ಯನು ಈ ಪ್ರಶ್ನೆಗೆ ತನ್ನ ಭಾವಸೂಚಕ ದೃಷ್ಟಿಯಿಂದಲೇ ಉತ್ತರ ಕೊಟ್ಟನು.

ಅನಂತರ ವೈದ್ಯನು, ಜೀನ್ ವಾಲ್ಜೀನನ ನಾಡಿ ಹಿಡಿದು ಪರೀಕ್ಷಿಸಿ, ಕೋಸೆಟ್ಟಳನ್ನೂ ಮೇರಿಯಸ್ಸನನ್ನೂ ನೋಡಿ, 'ಓಹೋ! ಈತನು ಬಯಸುತ್ತಿದ್ದುದು ನಿಮ್ಮನ್ನೇ!' ಎಂದು ಗೊಣಗುಟ್ಟಿ, ಮೇರಿಯಸ್ಸನ ಕಿವಿಯ ಬಳಿಗೆ ಬಾಗಿ, ಮೆಲ್ಲನೆ, 'ಕಾಲ ಮಿಾರಿಹೋಯಿತು,' ಎಂದನು.

ಜೀನ್ ವಾಲ್ಜೀನನು, ಕೋಸೆಟ್ಟಳನ್ನು ದೃಷ್ಟಿಸಿ ನೋಡು ತ್ತಿದ್ದ ಹಾಗೆಯೇ, ಮೇರಿಯಸ್ಸನ ಕಡೆಗೂ ವೈದ್ಯನ ಕಡೆಗೂ ತನ್ನ ಗಂಭೀರವಾದ ದೃಷ್ಟಿಯನ್ನು ತಿರುಗಿಸಿದನು. ಅವನ ಬಾಯಿಂದ ಅಸ್ಪಷ್ಟವಾಗಿ ಹೊರಟ ಈ ಮಾತುಗಳು ಅವರಿಗೆ ಕೇಳಿಸಿದುವು: 'ಸಾಯುವುದು ಸುಲಭ; ಆದರೆ ಈಗ ಜೀವಿಸದೆ ಹೋಗುವುದು ಬಹು ಭಯಂಕರ.'

ಬಾಗಿಲಲ್ಲಿದ್ದ ಪರಿಚಾರಿಣಿಯು ಬಂದು, ಅರ್ಧ ತೆರೆದಿದ್ದ ಬಾಗಿಲಿನಿಂದ ಒಳಗೆ ನೋಡುತ್ತಿದ್ದಳು. ವೈದ್ಯನು ಅವಳನ್ನು ಹೊರಗೆ ಕಳುಹಿಸಿಬಿಟ್ಟನು; ಆದರೆ ಭಕ್ತಿ ವಿಶ್ವಾಸಗಳಿಂದ ಕೂಡಿದ ಆ ದಯಾವತಿಯು ಹೋಗುವಾಗ, ಉತ್ಕ್ರಮಣಾವಸ್ಥೆಯಲ್ಲಿದ್ದ ಮುದುಕನನ್ನು ನೋಡಿ, 'ಪಾದ್ರಿಗಳನ್ನು ಕರೆತರಬೇಕೆ? ಎಂದು ಅಳುತ್ತ ಕೇಳಿದಳು. ವೈದ್ಯನು ಇದಕ್ಕೆ ಅಡ್ಡಿಮಾಡಲು ಸಾಧ್ಯ ವಾಗಲಿಲ್ಲ.

ಜೀನ್ ವಾಲ್ಜೀನನು, 'ಇಲ್ಲಿ ಒಬ್ಬರಿದ್ದಾರೆ' ಎಂದು, ತನ್ನ

ಕೈಬೆರಳಿಂದ ತಲೆಯ ಮೇಲ್ಗಡೆಯಲ್ಲಿ ತೋರಿಸಿದನು. ಅದನ್ನು ನೋಡಿದರೆ ಅವನ ಕಣ್ಣಿಗೆ ಯಾರೋ ಕಾಣುತ್ತಿದ್ದರೆಂದೇ ಹೇಳುವ ಹಾಗಿತ್ತು. ಹಿಂದೆ ಇವನಿಗೆ ಉಪಕಾರ ಮಾಡಿದ ಪಾದ್ರಿಯೇ ಈ ಮರಣಸಂಕಟಕ್ಕೆ ಸಾಕ್ಷಿಯಾಗಿ ನಿಂತು ಅವನಿಗೆ ಕಾಣುತ್ತಿದ್ದಿರಬಹುದು.

ಕೋಸೆಟ್ಟಳು ಮೆಲ್ಲನೆ, ಅವನ ಬೆನ್ನಿನ ಕೆಳಕ್ಕೆ ಒಂದು ದಿಂಬನ್ನು ಇಟ್ಟಳು. ಜೀನ್ ವಾಲ್ಜೀನನು ಮತ್ತೆ, 'ಮಾನ್‌ಸಿಯುರ್ ಪಾಂಟ್‌ಮರ್ಸಿ, ನೀನು ಸ್ವಲ್ಪವೂ ಭಯಪಡಬೇಡ, ಆರುನೂರು ಸಾವಿರ ಫ್ರಾಂಕುಗಳೂ ನಿಜವಾಗಿಯೂ ಕೋಸೆಟ್ಟಳ ಹಣವು. ನಾನು ಆ ಹಣವನ್ನು ಮಾಂಟ್‌ಫರ್ ಮೆಯಿಲ್ ಎಂಬ ಪ್ರಾಂತ್ಯದ ಹತ್ತಿರ ಬ್ಲೇರು ಪಟ್ಟಣದ ಆರಣ್ಯದಲ್ಲಿ ಒಂದು ಕಡೆ ಸುರಕ್ಷಿತವಾಗಿ ಹೂತಿಟ್ಟಿದ್ದೆನು,' ಎಂದನು.

ನಮಗೆ ಪ್ರಿಯವಾದ ವ್ಯಕ್ತಿಯೊಂದು ಸಾಯುವ ಸಮಯದಲ್ಲಿ ನಾವು ಅದನ್ನು ಒಂದು ಪ್ರೇಮ ದೃಷ್ಟಿಯಿಂದ ನೋಡುವೆವು. ಆ ದೃಷ್ಟಿಯು ಆ ವ್ಯಕ್ತಿಗೆ ಹತ್ತಿಕೊಂಡು ಅದನ್ನು ಹಿಂದಹಿಂದಕ್ಕೆ ಎಳೆಯುವಂತಿರುವುದು. ಮೇರಿಯಸ್ಸನೂ ಕೋಸೆಟ್ಟಳೂ ಕಾತರ ದುಃಖಗಳಿಂದ, ಜೀನ್ ವಾಲ್ಜೀನನಿಗೆ ಸನ್ನಿಹಿತವಾಗಿರುವ ಮರಣಕ್ಕಾಗಿ ಏನು ಹೇಳುವುದಕ್ಕೂ ತೋರದೆ, ಮಂಕಾಗಿ, ನಿರಾಶರಾಗಿ, ನಡುಗುತ್ತ ಒಬ್ಬರ ಕೈಯನ್ನೊಬ್ಬರು ಹಿಡಿದು ಮೂಕರಂತೆ ನಿಂತಿದ್ದರು.

ಜೀನ್ ವಾಲ್ಜೀನನ ಮುಖವು ಕಳಾಹೀನವಾಗಿ ಅದರಲ್ಲಿ ಸ್ವಲ್ಪ ಮುಗುಳ್ನಗೆ ಕಂಡಿತು. ಆದರಲ್ಲಿ ಜೀವವಿರಲಿಲ್ಲವೆಂತಲೇ ಹೇಳಬಹುದು. ಶ್ವಾಸವು ನಿಲ್ಲುತ್ತ ಬಂತು. ನೋಟವು ಗಂಭೀರವಾಯಿತು. ಅವನ ಶರೀರವು ಮರಣಾವಸ್ಥೆಯಲ್ಲಿರುವ ಒಂದು ಶವದಂತೆ ಇತ್ತು.

ಜೀನ್ ವಾಲ್ಜೀನನು ಮೊದಲು ಕೋಸೆಟ್ಟಳ ಬಳಿಗೂ ಅನಂತರ ಮೇರಿಯಸ್ಸನ ಕಡೆಗೂ ಜರುಗುವಂತೆ ಕಂಡನು.

ಅದೇ ಅವನ ಕಡೆಯ ಘಂಟೆಯ ಕಡೆಯ ನಿಮಿಷ. ಅವನು ಬಹಳ ಮೆಲ್ಲನೆಯ ಸ್ವರದಿಂದ ಅವರೊಡನೆ ಮಾತನಾಡಲಾರಂಭಿಸಿದನು. ಈ ಶಬ್ದವು ಯಾವುದೋ ಕಡೆಯಿಂದ ಬರುತ್ತಿದ್ದಂತೆ ಇತ್ತು. ಆಗಲೇ ಅವನು ಇವರಿಬ್ಬರನ್ನೂ ಅಗಲಿ ಹೋಗಿದ್ದನೆಂದು ಹೇಳ ಬಹುದಾಗಿತ್ತು.

'ಮೂನ್‌ಸಿಯುರ್ ಪಾಂಟ್‌ಮರ್ಸಿ, ನಾನು ನಿನ್ನನ್ನು ಸದಾ ಪ್ರೀತಿಸಿರಲಿಲ್ಲವೆಂಬ ನನ್ನ ತಪ್ಪನ್ನು ಒಪ್ಪಿಕೊಳ್ಳುತ್ತೇನೆ- ಇದಕ್ಕಾಗಿ ನಿನ್ನ ಕ್ಷಮೆಯನ್ನು ಬೇಡುವೆನು. ಈಗಲಾದರೋ, ಅವಳೂ ನೀನೂ ಇಬ್ಬರೂ ನನಗೆ ಒಂದೇ ರೀತಿಯಾಗಿ ಪ್ರಿಯವಾಗಿರುವಿರಿ. ನಾನು ನಿಮಗೆ ಬಹಳ ಕೃತಜ್ಞನಾಗಿದ್ದೇನೆ. ನೀನು ಕೋಸೆಟ್ಟಳನ್ನು ಸುಖ ವಾಗಿ ಕಾಪಾಡುವೆಯೆಂದು ನನ್ನ ನಂಬಿಕೆ. ನನ್ನ ವಿಷಯವನ್ನು ಸ್ವಲ್ಪ ಸ್ಮರಿಸಿಕೊಳ್ಳಿ. ನೀವು ಪುಣ್ಯಶಾಲಿಗಳು, ನನ್ನ ಗತಿಯೇನಾ ಗುವುದೆಂಬುದು ನನಗೆ ತಿಳಿಯದು. ನನ್ನ ಕಣ್ಣಿಗೆ ಒಂದು ಬೆಳಕು ಕಾಣುವುದು. ಬನ್ನಿ, ಇನ್ನೂ ಸಮೀಪಕ್ಕೆ ಬನ್ನಿ. ನಾನು ಆನಂದದಿಂದ ಪ್ರಾಣಬಿಡುವೆನು. ನಾನು ನನ್ನ ಕೈಗಳನ್ನು ಪ್ರೀತಿಯಿಂದ ನಿಮ್ಮಿಬ್ಬರ ತಲೆಯ ಮೇಲೆಯೂ ಇಟ್ಟು ಆಶೀ ರ್ವದಿಸುವೆನು,' ಎಂದನು.

ಕೋಸೆಟ್ಟಳೂ ಮೇರಿಯುಸ್ಸನೂ, ಉಕ್ಕಿ ಬಂದ ದುಃಖದಿಂದ ಕಣ್ಣೀರುಗರೆಯುತ್ತ ಗದ್ಗದ ಕಂಠದಿಂದ, ಜೀನ್ ವಾಲ್ಜೀನನ ಒಂದೊಂದು ಕೈಯನ್ನು ಒಬ್ಬೊಬ್ಬರು ಹಿಡಿದುಕೊಂಡು ಮೊಣ ಕಾಲೂರಿ ಕುಳಿತರು. ಆ ಮಹನೀಯನ ಕೈಗಳು ಇನ್ನು ಚಲಿಸಲಿಲ್ಲ.

ಅವನು ಹಿಂದಕ್ಕೆ ಬಿದ್ದುಬಿಟ್ಟನು. ಮೇಣದ ಬತ್ತಿಗಳ ಬೆಳಕು ಅವನ ಮೇಲೆ ಬಿದ್ದಿತ್ತು. ಬೆಳ್ಳಗಿದ್ದ ಅವನ ಮುಖವು ಮೇಲೆ ಸ್ವರ್ಗವನ್ನು ನೋಡುತ್ತಿದ್ದಿತು. ಕೋಸೆಟ್ಟಳೂ, ಮೇರಿ ಯುಸ್ಸನೂ ಅವನ ಕೈಗಳನ್ನು ಎಷ್ಟೋ ಸಲ ಮುತ್ತಿಟ್ಟು ಕೊಂಡರು. ಅವನು ಮೃತನಾದನು.

ಆ ರಾತ್ರಿಯು ನಕ್ಷತ್ರಗಳೂ ಕಾಣದಂತಹ ಕತ್ತಲಿಂದ ಕೂಡಿತ್ತು. ಆ ಅಂಧಕಾರದಲ್ಲಿ ಯಾವನೋ ತೇಜೋಮಯನಾದ ದೇವದೂತನು, ತನ್ನ ರೆಕ್ಕೆಗಳನ್ನು ವಿಸ್ತರಿಸಿ ಈ ಆತ್ಮವನ್ನು ಕರೆದೊಯ್ಯಲು ಕಾದಿದ್ದನೆಂಬುದಕ್ಕೆ ಯಾವ ಸಂದೇಹವೂ ಇರಲಿಲ್ಲ.

---

ಫೀನಿಕ್ಸ್ ಪ್ರಿಂಟಿಂಗ್ ಹೌಸ್, ಬೆಂಗಳೂರು ಸಿಟಿ.